KA / BG - GPO/ 2515 /WPP-47/ 2009 - 2011



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೧೨, ೨೦೦೯ (ಫಾಲ್ಗುಣ ೨೧, ಶಕ ವರ್ಷ ೧೯೩೦) | ನಂ. ೧೪೨ |
|---|---|---|

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ನಅಇ 37 ಎಂಎಲ್‌ಆರ್ 2009(1), ಬೆಂಗಳೂರು, ದಿನಾಂಕ : 11ನೇ ಮಾರ್ಚ್, 2009**

ಕರ್ನಾಟಕ ಮಹಾನಗರಪಾಲಿಕೆಗಳ ಅಧಿನಿಯಮ 32ರಲ್ಲಿ ಅಗತ್ಯವಿರುವಂತೆ **ಮೈಸೂರು** ಮಹಾನಗರಪಾಲಿಕೆಯ ಮಹಾಪೌರರ ಹಾಗೂ ಉಪ ಮಹಾಪೌರರ ಚುನಾವಣೆ ಫಲಿತಾಂಶವನ್ನು ಈ ಮೂಲಕ ಸಾರ್ವಜನಿಕರಿಗೆ ಅವಗಾಹನೆಗಾಗಿ ಪ್ರಚುರಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಸಿ.ಆರ್. ರವೀಂದ್ರ

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ಚುನಾವಣಾ ವಿವರಣಾ ಪಟ್ಟಿ**

**ಮೈಸೂರು ಮಹಾನಗರಪಾಲಿಕೆಯ ಮಹಾಪೌರರ ಚುನಾವಣೆ**

**(12ನೇ ಅವಧಿ)**

| ಕ್ರ. ಸಂ | ಅಭ್ಯರ್ಥಿಯ ಹೆಸರು | ಪಡೆದ ಸಿಂಧುವಾದ ಮತಗಳು |
|---|---|---|
| 1. | ಶ್ರೀ. ಪುರುಷೋತ್ತಮ | 37 |
| 2. | ಶ್ರೀ. ಪ್ರಭುಮೂರ್ತಿ | -- |

1. ಪಡೆದ ಸಿಂಧುವಾದ ಮತಗಳ ಒಟ್ಟು ಸಂಖ್ಯೆ : 37
2. ತಿರಸ್ಕೃತವಾದ ಮತಗಳ ಒಟ್ಟು ಸಂಖ್ಯೆ : --

ಶ್ರೀ.ಪುರುಷೋತ್ತಮ, ನಂ.2127, 2ನೇ ಕ್ರಾಸ್, ಅಶೋಕಪುರಂ, ಮೈಸೂರು ವಾರ್ಡ ನಂ.7 ಇವರು ಮಹಾಪೌರರ ಸ್ಥಾನಕ್ಕೆ ಬಹುಮತದಲ್ಲಿ ಕ್ರಮಬದ್ಧವಾಗಿ ಚುನಾಯಿತರಾಗಿದ್ದಾರೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ಮೇಯರ್ ಹಾಗೂ ಅಧ್ಯಕ್ಷಾಧಿಕಾರಿ,

ಮೈಸೂರು ಮಹಾನಗರಪಾಲಿಕೆ, ಮೈಸೂರು

**ಚುನಾವಣಾ ವಿವರಣಾ ಪಟ್ಟಿ**

**ಮೈಸೂರು ಮಹಾನಗರಪಾಲಿಕೆಯ ಉಪ ಮಹಾಪೌರರ ಚುನಾವಣೆ**

**(12ನೇ ಅವಧಿ)**

| ಕ್ರ. ಸಂ | ಅಭ್ಯರ್ಥಿಯ ಹೆಸರು | ಪಡೆದ ಸಿಂಧುವಾದ ಮತಗಳು |
|---|---|---|
| 1. | ಶ್ರೀಮತಿ.ಸುನಂದಪಾಲನೇತ್ರ | -- |
| 2. | ಶ್ರೀಮತಿ.ಶಾರದಮ್ಮ | 36 |

1. ಪಡೆದ ಸಿಂಧುವಾದ ಮತಗಳ ಒಟ್ಟು ಸಂಖ್ಯೆ : 36
2. ತಿರಸ್ಕೃತವಾದ ಮತಗಳ ಒಟ್ಟು ಸಂಖ್ಯೆ : --

ಶ್ರೀಮತಿ.ಶಾರದಮ್ಮ, ನಂ.136, 2ನೇ ಕ್ರಾಸ್, ಬಜಾರ್ ರಸ್ತೆ, ನಜರ್‌ಬಾದ್, ಮೈಸೂರು ವಾರ್ಡ ನಂ.64 ಇವರು ಉಪ ಮಹಾಪೌರರ ಸ್ಥಾನಕ್ಕೆ ಬಹುಮತದಲ್ಲಿ ಕ್ರಮಬದ್ದವಾಗಿ ಚುನಾಯಿತರಾಗಿದ್ದಾರೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ಮೇಯರ್ ಹಾಗೂ ಅಧ್ಯಕ್ಷಾಧಿಕಾರಿ,
ಮೈಸೂರು ಮಹಾನಗರಪಾಲಿಕೆ, ಮೈಸೂರು

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೧೨, ೨೦೦೯ (ಫಾಲ್ಗುಣ ೨೧, ಶಕ ವರ್ಷ ೧೯೩೦) | ನಂ. ೧೪೩ |
|---|---|---|

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ನಅಇ 37 ಎಂಎಲ್‌ಆರ್ 2009(2), ಬೆಂಗಳೂರು, ದಿನಾಂಕ : 11ನೇ ಮಾರ್ಚ್, 2009**

ಕರ್ನಾಟಕ ಮಹಾನಗರಪಾಲಿಕೆಗಳ ಅಧಿನಿಯಮ 32ರಲ್ಲಿ ಅಗತ್ಯವಿರುವಂತೆ ಮಂಗಳೂರು ಮಹಾನಗರಪಾಲಿಕೆಯ ಮಹಾಪೌರರ ಹಾಗೂ ಉಪ ಮಹಾಪೌರರ ಚುನಾವಣೆ ಫಲಿತಾಂಶವನ್ನು ಈ ಮೂಲಕ ಸಾರ್ವಜನಿಕರಿಗೆ ಅವಗಾಹನೆಗಾಗಿ ಪ್ರಚುರಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಸಿ.ಆರ್. ರವೀಂದ್ರ
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ಚುನಾವಣಾ ವಿವರಣಾ ಪಟ್ಟಿ**

**ಮಂಗಳೂರು ಮಹಾನಗರಪಾಲಿಕೆಯ ಮಹಾಪೌರರ ಚುನಾವಣೆ**

**(12ನೇ ಅವಧಿ)**

| ಕ್ರ. ಸಂ | ಅಭ್ಯರ್ಥಿಯ ಹೆಸರು | ಪಡೆದ ಸಿಂಧುವಾದ ಮತಗಳು |
|---|---|---|
| 1. | ಶ್ರೀ.ಅಶೋಕ್ ಶೆಟ್ಟಿ | 21 |
| 2. | ಶ್ರೀ.ಎಂ.ಶಂಕರ್ ಭಟ್ | 39 |

1. ಪಡೆದ ಸಿಂಧುವಾದ ಮತಗಳ ಒಟ್ಟು ಸಂಖ್ಯೆ : 60
2. ತಿರಸ್ಕೃತವಾದ ಮತಗಳ ಒಟ್ಟು ಸಂಖ್ಯೆ : --
3. ತಟಸ್ಥವಾದ ಮತಗಳ ಒಟ್ಟು ಸಂಖ್ಯೆ : 3

ಶ್ರೀ.ಶಂಕರ್ ಭಟ್.ಎಂ, ದಿ: ಎಂ.ವಿ.ಭಟ್‌ರವರ ಮಗ, ಮನೆ ನಂಬ್ರ.2-44/1, ಹರಿಪದವು ರಸ್ತೆ, ಅಂಚೆ ಕೊಂಚಾಡಿ, ಮಂಗಳೂರು ಇವರು ಮಹಾಪೌರರ ಸ್ಥಾನಕ್ಕೆ ಬಹುಮತದಲ್ಲಿ ಕ್ರಮಬದ್ದವಾಗಿ ಚುನಾಯಿತರಾಗಿದ್ದಾರೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ಮೇಯರ್ ಹಾಗೂ ಅಧ್ಯಕ್ಷಾಧಿಕಾರಿ,
ಮಂಗಳೂರು ಮಹಾನಗರಪಾಲಿಕೆ, ಮಂಗಳೂರು

**ಚುನಾವಣಾ ವಿವರಣಾ ಪಟ್ಟಿ**

**ಮಂಗಳೂರು ಮಹಾನಗರಪಾಲಿಕೆಯ ಉಪ ಮಹಾಪೌರರ ಚುನಾವಣೆ**

**(12ನೇ ಅವಧಿ)**

| ಕ್ರ. ಸಂ | ಅಭ್ಯರ್ಥಿಯ ಹೆಸರು | ಪಡೆದ ಸಿಂಧುವಾದ ಮತಗಳು |
|---|---|---|
| 1. | ಶ್ರೀಮತಿ.ಭಾರತಿ ದಿನೇಶ್ | 21 |
| 2. | ಶ್ರೀಮತಿ.ರಜನಿ ದುಗ್ಗಣ್ಣ | 39 |

1. ಪಡೆದ ಸಿಂಧುವಾದ ಮತಗಳ ಒಟ್ಟು ಸಂಖ್ಯೆ : 60

2. ತಿರಸ್ಕೃತವಾದ ಮತಗಳ ಒಟ್ಟು ಸಂಖ್ಯೆ : --
3. ತಟಸ್ಥವಾದ ಮತಗಳ ಒಟ್ಟು ಸಂಖ್ಯೆ : 3

ಶ್ರೀಮತಿ.ರಜನಿ ದುಗ್ಗಣ್ಣ ಕೋಂ ದುಗ್ಗಣ್ಣ, ಮನೆ ನಂಬ್ರ.22-71, ದುರ್ಗಾ ನಿವಾಸ, ಶ್ರೀನಿವಾಸನಗರ, ಸುರತ್ಕಲ್, ಮಂಗಳೂರು ಇವರು ಉಪ ಮಹಾಪೌರರ ಸ್ಥಾನಕ್ಕೆ ಬಹುಮತದಲ್ಲಿ ಕ್ರಮಬದ್ಧವಾಗಿ ಚುನಾಯಿತರಾಗಿದ್ದಾರೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ಮೇಯರ್ ಹಾಗೂ ಅಧ್ಯಕ್ಷಾಧಿಕಾರಿ,
ಮಂಗಳೂರು ಮಹಾನಗರಪಾಲಿಕೆ, ಮಂಗಳೂರು

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೧೨, ೨೦೦೯ (ಫಾಲ್ಗುಣ ೨೧, ಶಕ ವರ್ಷ ೧೯೩೦) | ನಂ. ೧೪೪ |
|---|---|---|

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ನಅಇ 37 ಎಂಎಲ್ಆರ್ 2009(3), ಬೆಂಗಳೂರು, ದಿನಾಂಕ : 11ನೇ ಮಾರ್ಚ್, 2009**

ಕರ್ನಾಟಕ ಮಹಾನಗರಪಾಲಿಕೆಗಳ ಅಧಿನಿಯಮ 32ರಲ್ಲಿ ಅಗತ್ಯವಿರುವಂತೆ **ಹುಬ್ಬಳ್ಳಿ-ಧಾರವಾಡ** ಮಹಾನಗರಪಾಲಿಕೆಯ ಮಹಾಪೌರರ ಹಾಗೂ ಉಪ ಮಹಾಪೌರರ ಚುನಾವಣೆ ಫಲಿತಾಂಶವನ್ನು ಈ ಮೂಲಕ ಸಾರ್ವಜನಿಕರಿಗೆ ಅವಗಾಹನೆಗಾಗಿ ಪ್ರಚುರಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಆರ್. ರವೀಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ಚುನಾವಣಾ ವಿವರಣಾ ಪಟ್ಟಿ**

**ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಯ ಮಹಾಪೌರರ ಚುನಾವಣೆ**

**(12ನೇ ಅವಧಿ)**

| ಕ್ರ. ಸಂ | ಅಭ್ಯರ್ಥಿಯ ಹೆಸರು | ಪಡೆದ ಸಿಂಧುವಾದ ಮತಗಳು |
|---|---|---|
| 1. | ಶ್ರೀ. ವೀರಣ್ಣಾ ಸವಡಿ | ಅವಿರೋಧವಾಗಿ ಆಯ್ಕೆ |

1. ಪಡೆದ ಸಿಂಧುವಾದ ಮತಗಳ ಒಟ್ಟು ಸಂಖ್ಯೆ : --
2. ತಿರಸ್ಕೃತವಾದ ಮತಗಳ ಒಟ್ಟು ಸಂಖ್ಯೆ : --
3. ತಟಸ್ಥವಾದ ಮತಗಳ ಒಟ್ಟು ಸಂಖ್ಯೆ : --

ಶ್ರೀ.ವೀರಣ್ಣ ಸವಡಿ, ಮ.ನಂ.115, ವಿಜಯನಗರ, ಹುಬ್ಬಳ್ಳಿ ವಾರ್ಡ್ ನಂ.33 ಇವರು ಮಹಾಪೌರರ ಸ್ಥಾನಕ್ಕೆ ಅವಿರೋಧವಾಗಿ ಹಾಗೂ ಕ್ರಮಬದ್ಧವಾಗಿ ಚುನಾಯಿತರಾಗಿದ್ದಾರೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ಮೇಯರ್ ಹಾಗೂ ಅಧ್ಯಕ್ಷಾಧಿಕಾರಿ,
ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆ, ಹುಬ್ಬಳ್ಳಿ-
ಧಾರವಾಡ

**ಚುನಾವಣಾ ವಿವರಣಾ ಪಟ್ಟಿ**

**ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಯ ಉಪ ಮಹಾಪೌರರ ಚುನಾವಣೆ**

**(12ನೇ ಅವಧಿ)**

| ಕ್ರ. ಸಂ | ಅಭ್ಯರ್ಥಿಯ ಹೆಸರು | ಪಡೆದ ಸಿಂಧುವಾದ ಮತಗಳು |
|---|---|---|
| 1. | ಶ್ರೀ.ವೆಂಕಟೇಶ ಮೇಸ್ತ್ರಿ | ಅವಿರೋಧವಾಗಿ ಆಯ್ಕೆ |

1. ಪಡೆದ ಸಿಂಧುವಾದ ಮತಗಳ ಒಟ್ಟು ಸಂಖ್ಯೆ : --
2. ತಿರಸ್ಕೃತವಾದ ಮತಗಳ ಒಟ್ಟು ಸಂಖ್ಯೆ : --

3.  ತಟಸ್ಥವಾದ ಮತಗಳ ಒಟ್ಟು ಸಂಖ್ಯೆ : --

ಶ್ರೀ.ವೆಂಕಟೇಶ ಮೇಸ್ತ್ರಿ, ತೋರವಿ ಹಕ್ಕಲ, ಜಿಗಳೂರ ಕಲ್ಯಾಣ ಮಂಟಪ ಹತ್ತಿರ, ಹುಬ್ಬಳ್ಳಿ ವಾರ್ಡ್ ನಂ.44 ಇವರು ಉಪ ಮಹಾಪೌರರ ಸ್ಥಾನಕ್ಕೆ ಅವಿರೋಧವಾಗಿ ಹಾಗೂ ಕ್ರಮಬದ್ಧವಾಗಿ ಚುನಾಯಿತರಾಗಿದ್ದಾರೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ಮೇಯರ್ ಹಾಗೂ ಅಧ್ಯಕ್ಷಾಧಿಕಾರಿ,
ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆ,
ಹುಬ್ಬಳ್ಳಿ-ಧಾರವಾಡ

## ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಮಾರ್ಚ್ ೧೨, ೨೦೦೯ (ಫಾಲ್ಗುಣ ೨೧, ಶಕ ವರ್ಷ ೧೯೩೦) | ನಂ. ೧೮೫ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ಶಿಕ್ಷಣ ಸಚಿವಾಲಯ**

**ವಿಷಯ :** 2009-10ನೇ ಶೈಕ್ಷಣಿಕ ಸಾಲಿಗೆ ಸರ್ಕಾರದ ಪಾಲಿನ ಇಂಜಿನಿಯರಿಂಗ್ ಕೋರ್ಸಿನ ಒಟ್ಟು ಸೀಟುಗಳ ಪೈಕಿ ಶೇಕಡ 50 ರಷ್ಟನ್ನು ಆರ್ಥಿಕವಾಗಿ ಹಿಂದುಳಿದ ಅರ್ಹ ಅಭ್ಯರ್ಥಿಗಳಿಗೆ ರೂ. 15,000-00 ಗಳ ಬೋಧನಾ ಶುಲ್ಕಕ್ಕೆ ಹಂಚಿಕೆ ಮಾಡುವ ಬಗ್ಗೆ ಆದೇಶ.

**ಪ್ರಸ್ತಾವನೆ :**

ಆರ್ಥಿಕವಾಗಿ ಹಿಂದುಳಿದ ಪ್ರತಿಭಾವಂತ ವಿದ್ಯಾರ್ಥಿಗಳು ವೃತ್ತಿಪರ ಕೋರ್ಸುಗಳಲ್ಲಿ (ಇಂಜಿನಿಯರಿಂಗ್ ಪದವಿ) ಉನ್ನತ ಶಿಕ್ಷಣ ಹೊಂದುವಂತೆ ಉತ್ತೇಜಿಸುವ ನಿಟ್ಟಿನಲ್ಲಿ ಸರ್ಕಾರವು 2009-10ನೇ ಶೈಕ್ಷಣಿಕ ಸಾಲಿಗೆ ಸರ್ಕಾರದ ಪಾಲಿನ ಇಂಜಿನಿಯರಿಂಗ್ ಕೋರ್ಸಿನ ಸರ್ಕಾರಿ ಕೋಟಾ ಸೀಟುಗಳ ಶೇಕಡ 50 ರಷ್ಟನ್ನು ಆರ್ಥಿಕವಾಗಿ ಹಿಂದುಳಿದ ಹಾಗೂ ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಹೆಚ್ಚಿನ ರ್‍ಯಾಂಕ್‌ಗಳಿಸುವ ಅರ್ಹ ಅಭ್ಯರ್ಥಿಗಳಿಗೆ ರೂ. 15,000-00 ಗಳ ಶುಲ್ಕಕ್ಕೆ ಹಂಚಿಕೆ ಮಾಡುವ ಬಗ್ಗೆ ಸರ್ಕಾರದ ಮಟ್ಟದಲ್ಲಿ ಚಿಂತನೆ ನಡೆಸಲಾಯಿತು. ಸರ್ಕಾರಿ ಕೋಟಾ ಸೀಟುಗಳ ಪೈಕಿ ಶೇ. 50ರಷ್ಟನ್ನು ರೂ.15,000/-ಗಳ ಶುಲ್ಕಕ್ಕೆ ನಿಗದಿಪಡಿಸುವ ಬಗ್ಗೆ ಮಂಡಳಿಯವರೊಂದಿಗೆ ದಿನಾಂಕ:13-01-2009 ರಂದು ನಡೆದ ಸಭೆಯಲ್ಲಿ ಪ್ರಸ್ತಾವನೆಯನ್ನು ಒಪ್ಪಿಕೊಂಡಿರುತ್ತಾರೆ. ಅದರಂತೆ ಆರ್ಥಿಕವಾಗಿ ಹಿಂದುಳಿದ ಹಾಗೂ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಗುರುತಿಸುವ ಸಲುವಾಗಿ ಸಮಾಜ ಕಲ್ಯಾಣ ಇಲಾಖೆಯು ಹೊರಡಿಸಿರುವ ಆದೇಶ ಸಂಖ್ಯೆ : ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ:30-03-2002ರ ಆದೇಶದಲ್ಲಿ ನಿಗದಿಪಡಿಸಿರುವ ವಾರ್ಷಿಕ ಆದಾಯದ ಮಾನದಂಡದಂತೆ ಅರ್ಹರಾಗುವ ಹಾಗೂ ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಹೆಚ್ಚಿನ ರ್‍ಯಾಂಕನ್ನು ಪಡೆಯುವ ಹಾಗೂ ತಹಸೀಲ್ದಾರ್ ಇವರು ನೀಡುವ ಆದಾಯ ಪ್ರಮಾಣ ಪತ್ರವನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನಡೆಸಲಿರುವ ಕೌನ್ಸಿಲಿಂಗ್ ಸಮಯದಲ್ಲಿ ಪ್ರಸ್ತುತ ಪಡಿಸುವ ಅಭ್ಯರ್ಥಿಗಳಿಗೆ ಹಂಚಿಕೆ ಮಾಡಲು ದಿನಾಂಕ : 28-01-2009ರ ಅಧಿಕಾರಿಗಳ ಸಭೆಯಲ್ಲಿ ತೀರ್ಮಾನಿಸಲಾಗಿದ್ದು ಸರ್ಕಾರವು ಇದಕ್ಕೆ ಒಪ್ಪಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 8 ಟಿಇಸಿ 2009(ಭಾಗ), ಬೆಂಗಳೂರು, ದಿನಾಂಕ : 02ನೇ ಮಾರ್ಚ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ 2009-10ನೇ ಶೈಕ್ಷಣಿಕ ಸಾಲಿಗೆ ಇಂಜಿನಿಯರಿಂಗ್ ಕೋರ್ಸುಗಳ ಸರ್ಕಾರದ ಪಾಲಿನ ಒಟ್ಟು ಸೀಟುಗಳ ಪೈಕಿ ಶೇಕಡ 50 ರಷ್ಟನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಹೆಚ್ಚಿನ ರ್‍ಯಾಂಕನ್ನು ಪಡೆಯುವ ಹಾಗೂ ಸಮಾಜ ಕಲ್ಯಾಣ ಇಲಾಖೆಯ ಆದೇಶ ಸಂಖ್ಯೆ : ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ:30-03-2002 ರಲ್ಲಿ ಕಾಣಿಸಿದಂತಹ 'ಕೆನೆಪದರ' ನೀತಿ ವ್ಯಾಪ್ತಿಯಲ್ಲಿ ಬರುವವರನ್ನು ಹೊರತುಪಡಿಸಿ ಉಳಿದ ಅಭ್ಯರ್ಥಿಗಳಿಗೆ ಬಡತನದ ಸೌಲಭ್ಯ ದೊರೆಯಲಿದ್ದು, ಅಂತಹವರುಗಳು ತಹಸೀಲ್ದಾರ್ ರವರು ನೀಡುವ ಆದಾಯ ಪ್ರಮಾಣ ಪತ್ರವನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನಡೆಸಲಿರುವ ಕೌನ್ಸಿಲಿಂಗ್ ಸಮಯದಲ್ಲಿ ಹಾಜರುಪಡಿಸುವ ಅರ್ಹ ಅಭ್ಯರ್ಥಿಗಳಿಗೆ ರೂ. 15,000-00ಗಳ ಬೋಧನಾ ಶುಲ್ಕಕ್ಕೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ಸೀಟುಗಳನ್ನು ಹಂಚಿಕೆ ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**ವಿಶೇಷ ಪತ್ರಿಕೆ**

| ಭಾಗ – I | ಬೆಂಗಳೂರು, ಗುರುವಾರ, ಮಾರ್ಚ್ ೧೨, ೨೦೦೯ (ಫಾಲ್ಗುಣ ೨೧, ಶಕ ವರ್ಷ ೧೯೩೦) | ನಂ. ೧೪೬ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**
**ಶಿಕ್ಷಣ ಸಚಿವಾಲಯ**

**ವಿಷಯ :** ಒಂದೇ ಆವರಣದಲ್ಲಿರುವ ಸರ್ಕಾರಿ ಪ್ರಾಥಮಿಕ ಶಾಲೆ ಹಾಗೂ ಸರ್ಕಾರಿ ಪ್ರೌಢಶಾಲೆಯನ್ನು ವಿಲೀನಗೊಳಿಸಿ ಸಂಯುಕ್ತ ಪ್ರೌಢ ಶಾಲೆಗಳನ್ನಾಗಿ ಮಾರ್ಪಡಿಸಿ ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ :** 1) ದಿನಾಂಕ:04–05–2007ರ ಸರ್ಕಾರಿ ಆದೇಶದ ಸಂಖ್ಯೆ ಇಡಿ32ಎಸ್‌ಎಲ್‌ಬಿ2007
2) ದಿನಾಂಕ:20–09–2007ರ ಸರ್ಕಾರಿ ಆದೇಶದ ಸಂಖ್ಯೆ:ಇಡಿ208 ಎಲ್‌ಐಬಿ2007
3) ದಿನಾಂಕ:01–12–2008ರಂದು ಸರ್ಕಾರದ ಕಾರ್ಯದರ್ಶಿ (ಪ್ರಾ ಮತ್ತು ಪ್ರೌ.ಶಿಕ್ಷಣ), ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ.

**ಪ್ರಸ್ತಾವನೆ :–**

ಮೇಲೆ ಓದಲಾದ (1) ರನ್ವಯ ಆದೇಶದ ಪ್ರಕಾರ 521 ಶಾಲೆಗಳು ಹಾಗೂ (2)ರಲ್ಲಿಯ ಆದೇಶದ ಪ್ರಕಾರ 2120 ಸಂಯುಕ್ತ ಪ್ರೌಢಶಾಲೆಗಳು ಅಸ್ತಿತ್ವಕ್ಕೆ ಬಂದಿದೆ. ಈ ಸಂಯುಕ್ತ ಪ್ರೌಢಶಾಲೆಗಳು ಸದರಿ ಆದೇಶದಲ್ಲಿ ವಿಧಿಸಲಾದ ಇತಿಮಿತಿಯಲ್ಲಿ ಕಾರ್ಯ ನಿರ್ವಹಿಸುತ್ತವೆ. ಸದರಿ ಸಂಯುಕ್ತ ಪ್ರೌಢಶಾಲೆಗಳ ಪದ್ಧತಿಯ ಕುರಿತು ಹಲವಾರು ವೇದಿಕೆಗಳಲ್ಲಿ ಹಾಗೂ ಉನ್ನತ ಮಟ್ಟದ ಸಭೆಗಳಲ್ಲಿ ವ್ಯವಸ್ಥೆಯಲ್ಲಿರಬಹುದಾದ ಲೋಪ ದೋಷಗಳ ಬಗ್ಗೆ ಹಾಗೂ ಸಾಧಕ ಬಾಧಕಗಳ ಬಗ್ಗೆ ಚರ್ಚೆ ನಡೆದು, ಶಿಕ್ಷಕರ ಹಾಗೂ ಸಂಘ ಸಂಸ್ಥೆಗಳ ಆಶೋತ್ತರಗಳಿಗೆ ಒಂದು ಚರ್ಚಿತ ವಿಷಯವನ್ನಾಗಿ ಮಾರ್ಪಟ್ಟಿತು.

2. ಸಂಯುಕ್ತ ಪ್ರೌಢಶಾಲೆ ಕಾರ್ಯ ವಿಧಾನ ಕುರಿತು ಶಿಕ್ಷಕರ ಸಂಘದ ಪದಾಧಿಕಾರಿಗಳ ಹಾಗೂ ಶಿಕ್ಷಕರ ಸಭೆಯನ್ನು ದಿ: 22–12–2007ರಂದು ಸರ್ಕಾರದ ಕಾರ್ಯದರ್ಶಿಗಳ ಸಮ್ಮುಖದಲ್ಲಿ ಚರ್ಚಿಸಲಾಯಿತು. ಚರ್ಚೆಯಲ್ಲಿ ಹಲವಾರು ಸಮಸ್ಯೆಗಳು ಈ ವಿಧಾನದ ಬಗ್ಗೆ ವ್ಯತಿರಿಕ್ತ ಸನ್ನಿವೇಶಗಳು, ಆಡಳಿತದಲ್ಲಿ ಬರುವ ಲೋಪ ದೋಷಗಳ ಹಾಗೂ ಅದಕ್ಕೂ ಹೆಚ್ಚಾಗಿ ಶಾಲೆಯ ದೂರ ಇತ್ಯಾದಿಗಳ ಬಗ್ಗೆ ಸುದೀರ್ಘವಾಗಿ ಚರ್ಚೆ ನಡೆಯಿತು. ಅಂದಿನ ಸಭೆಯಲ್ಲಿ ಹಾಜರಿದ್ದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ನೇತೃತ್ವದಲ್ಲಿ ಒಂದು ಸಮಿತಿ ರಚಿಸಿ, ಸಂಯುಕ್ತ ಪ್ರೌಢಶಾಲೆ ಪದ್ಧತಿಯ ಸಾಧಕ ಬಾಧಕಗಳನ್ನು ಪರಿಷ್ಕರಿಸಿ ವರದಿ ಮಾಡಲು ಸರ್ಕಾರದ ಕಾರ್ಯದರ್ಶಿಗಳು ಸೂಚನೆ ನೀಡಿದರು. ಇದರನ್ವಯ ದಿ:13–02–2008 ರ ಜ್ಞಾಪನದ ಮೂಲಕ ಒಂದು ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯು ನಾಲ್ಕು ವಿವಿಧ ದಿನಾಂಕಗಳಂದು ಸಭೆ ನಡೆಸಿ, ಸಂಯುಕ್ತ ಪ್ರೌಢಶಾಲೆಗೆ ಸಂಬಂಧಿಸಿದ 20 ಅಂಶಗಳ ಬಗ್ಗೆ ಚರ್ಚಿಸಲಾಯಿತು.

3. ಈ ಪದ್ಧತಿಯ ಮೂಲ ಉದ್ದೇಶವು ಶೈಕ್ಷಣಿಕ ಶ್ರೇಯೋಭಿವೃದ್ಧಿಗಾಗಿ ಲಭ್ಯವಿರುವ ಸಂಪನ್ಮೂಲಗಳನ್ನು ಸದ್ವಿನಿಯೋಗವಾಗಬೇಕೆಂಬ ಉದ್ದೇಶದಿಂದ ಪ್ರಾರಂಭಗೊಂಡ ಯೋಜನೆಯ ವಿವರವನ್ನು ನೀಡಿದಾಗ, ಸಮಿತಿಯು ಅಂತಿಮವಾಗಿ ಒಂದೇ ಆವರಣದಲ್ಲಿರುವ ಹಾಗೂ ಮೂರು ವಿಭಾಗ ಹೊಂದಿದ ಸರ್ಕಾರಿ ಪ್ರೌಢಶಾಲೆಗಳೊಂದಿಗೆ ಅದೇ ಆವರಣದಲ್ಲಿರುವ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯನ್ನು ಸಂಯುಕ್ತ ಪ್ರೌಢಶಾಲೆಯಡಿಯಲ್ಲಿ ಮುಂದುವರೆಸಬಹುದಾಗಿದೆ ಎಂಬ ಒಮ್ಮತದ ತೀರ್ಮಾನಕ್ಕೆ ಬರಲಾಯಿತು. ಅಂದರೆ ದೂರದ ಸ್ವತಂತ್ರವಾಗಿರುವ ಕಿರಿಯ ಪ್ರಾಥಮಿಕ ಶಾಲೆಗಳು ಹೊರತುಪಡಿಸಿ ಪರಿಪೂರ್ಣವಾದಂತಹ 1 ರಿಂದ 7 ತರಗತಿ ಹೊಂದಿರುವ ಹಿರಿಯ ಪ್ರಾಥಮಿಕ ಶಾಲೆಗಳನ್ನು ಈ ವ್ಯಾಪ್ತಿಗೆ ಸೇರಿಸಬಹುದಾಗಿದೆ ಎಂಬ ನಿರ್ಣಯ ದೊಂದಿಗೆ. ವರದಿಯನ್ನು ದಿ:09–04–2008ರಂದು ಸರ್ಕಾರಕ್ಕೆ ಸಲ್ಲಿಸಲಾಯಿತು. ಈ ಬಗ್ಗೆ ಸರ್ಕಾರದ ಮಟ್ಟದಲ್ಲಿ ಸಭೆ ನಡೆದು ಮೇಲೆ ಓದಲಾದ (3)ರನ್ವಯ ನಡವಳಿ ಹೊರಡಿಸಿ, ಹಿಂದಿನ ಆದೇಶಗಳನ್ವಯ ರಚಿಸಲಾದ ಸಂಯುಕ್ತ ಪ್ರೌಢ ಶಾಲಾ ಪದ್ಧತಿಯನ್ನು ರದ್ದು ಪಡಿಸಿ, ಈ ಸಂಬಂಧವಾಗಿ ಹೊಸದಾದ ಆದೇಶ ಹೊರಡಿಸಲು ತೀರ್ಮಾನಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 93 ಎಲ್‌ಐಬಿ 2008, ಬೆಂಗಳೂರು, ದಿನಾಂಕ : 02.03.2009**

4. ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸಂಯುಕ್ತ ಪ್ರೌಢಶಾಲೆಗೆ ಕುರಿತಾಗಿ ಈಗಾಗಲೇ ಹೊರಡಿಸಲಾದ ಸರ್ಕಾರದ ಆದೇಶದ ಸಂಖ್ಯೆ ಇಡಿ 32 ಎಸ್.ಎಲ್.ಬಿ 2007, ದಿನಾಂಕ: 04.05.2007 ಹಾಗೂ ಆದೇಶ ಸಂಖ್ಯೆ ಇಡಿ 208 ಎಲ್‌ಐಬಿ 2007, ದಿನಾಂಕ: 20.09.2007ನ್ನು ಸಂಪೂರ್ಣವಾಗಿ ಹಿಂತೆಗೆದುಕೊಳ್ಳಲಾಗಿದೆ. ಮುಂದುವರೆದು ಸಂಯುಕ್ತ ಪ್ರೌಢಶಾಲೆಗಳಿಗೆ ಸಂಬಂಧಿಸಿದಂತೆ ಈ ಕೆಳಗಿನ ಷರತ್ತಿನೊಂದಿಗೆ ಸರ್ಕಾರದ ಮುಂದಿನ ಆದೇಶದವರೆಗೆ 2009–10ನೇ ಶೈಕ್ಷಣಿಕ ವರ್ಷದಿಂದ ಜಾರಿಗೊಳಿಸುವಂತೆ ಪುನ: ಪರಿಷ್ಕರಿಸಿ ಆದೇಶಿಸಿದೆ.

**1. ಸಂಯುಕ್ತ ಪ್ರೌಢಶಾಲೆಯ ಉದ್ದೇಶಗಳು:–**

1. ಸೌಕರ್ಯ – ಸೌಲಭ್ಯ ಹಾಗೂ ಮಾನವ ಸಂಪನ್ಮೂಲಗಳ ಪೂರ್ಣ ಸದ್ಬಳಕೆ.
2. ಪರಿಣಾಮಕಾರಿ ಮೇಲ್ವಿಚಾರಣೆ
3. ಅಧಿಕಾರ ವಿಕೇಂದ್ರೀಕರಣ
4. ಶಿಕ್ಷಣದ ಗುಣಮಟ್ಟ ಹೆಚ್ಚಿಸುವುದು.
5. ಪ್ರಗತಿಯನ್ನು ತುಲನಾತ್ಮಕವಾಗಿ ಪರಿಶೀಲಿಸುವುದು.

**2. ವಿಧಿ ವಿಧಾನ: ಸರ್ಕಾರಿ ಸಂಯುಕ್ತ ಪ್ರೌಢ ಶಾಲೆ :–** ಒಂದೇ ಆವರಣದಲಿರುವ ರಾಜ್ಯದ ಎಲ್ಲಾ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳು ಮಾತ್ರ ಸಂಯುಕ್ತ ಪ್ರೌಢ ಶಾಲೆ ವ್ಯಾಪ್ತಿಗೆ ಒಳಪಡುತ್ತವೆ. ಸಂಯುಕ್ತ ಪ್ರೌಢ ಶಾಲೆಯಲ್ಲಿಯ ಹಿರಿಯ ಪ್ರಾಥಮಿಕ ಶಾಲೆಯ ಟಿ.ಜಿ.ಟಿ ಗಳ ಸೇವೆಯನ್ನು ಪ್ರಾಥಮಿಕ ಹಾಗೂ ಪ್ರೌಢಶಾಲೆ ತರಗತಿ ಬೋಧನೆಗೆ ಬಳಸತಕ್ಕದ್ದು. ಇದರೊಂದಿಗೆ ಪ್ರೌಢ ಶಾಲಾ ಹಂತದಲ್ಲಿ ವಿಜ್ಞಾನ ಹಾಗೂ ಆಂಗ್ಲ ಬೋಧನೆ ಮಾಡುವ ಶಿಕ್ಷಕರ ಸೇವೆಯನ್ನು ಅಗತ್ಯಕ್ಕನುಗುಣವಾಗಿ 5 ರಿಂದ 10ನೇ ತರಗತಿಯ ಬೋದನೆಗೆ ಬಳಸುವುದು. ಸರ್ಕಾರಿ ಪ್ರೌಢಶಾಲೆಯ ವಿಭಾಗದಲ್ಲಿನ ಶಿಕ್ಷಕರ ಗರಿಷ್ಠ ಬೋಧನಾ ಅವಧಿಯನ್ನು ಸಂಪೂರ್ಣವಾಗಿ ಬಳಸುವ ಉದ್ದೇಶದಿಂದ ಹಾಗೂ 6, 7ನೇ ತರಗತಿಯಲ್ಲಿನ ವಿಷಯ ಶಿಕ್ಷಕರ ಅಗತ್ಯತೆಯ ಆಧಾರದ ಮೇಲೆ ಇವರ ಸೇವೆ ಬಳಸಬಹುದಾಗಿದೆ.

**3. ಎಸ್.ಡಿ.ಎಂ.ಸಿ.ಗಳ ಪಾತ್ರ :–** ಪ್ರಸ್ತುತ ಎಸ್.ಡಿ.ಎಂ.ಸಿ ರಚನೆಯಂತೆ ಪ್ರಾಥಮಿಕ ಶಾಲೆಗೆ ಪ್ರತ್ಯೇಕ ವಿಧಿವಿಧಾನವಿದ್ದು, ಮುಂದಿನ ಆದೇಶದವರೆಗೆ ಅವು ಯಥಾವತ್ತಾಗಿ ಮುಂದುವರೆಯುತ್ತವೆ. ಅಲ್ಲದೆ ಆ ಶಾಲೆಯ ಮುಖ್ಯಸ್ಥರು ಅವರಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾರೆ. ಆದರೆ ಸರ್ಕಾರಿ ಸಂಯುಕ್ತ ಪ್ರೌಢಶಾಲೆಯ ಮುಖ್ಯಸ್ಥರನ್ನು ಎಸ್.ಡಿ.ಎಂ.ಸಿ ಸಭೆಗೆ ಅಹ್ವಾನಿಸಬಹುದು. ಅದರಂತೆ ಸರ್ಕಾರಿ ಸಂಯುಕ್ತ ಪ್ರೌಢಶಾಲೆಯಲ್ಲಿರುವ ಎಸ್.ಡಿ.ಎಂ.ಸಿ ನಿಯಮದಂತೆ ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತದೆ. ಇಲ್ಲಿ ಶಾಲೆಯ ಸಮಗ್ರ ಅಭಿವೃದ್ಧಿ ದೃಷ್ಟಿಯಿಂದ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರನ್ನು ಅಹ್ವಾನಿತರೆಂದು ಅಹ್ವಾನಿಸಬಹುದಾಗಿದೆ.

**4. ಅಧಿಕಾರ ವ್ಯಾಪ್ತಿ :** ಇದೊಂದು ವಿನೂತನ ಪ್ರಯೋಗವಾಗಿದ್ದು, ಇಲ್ಲಿ ಹಿರಿಯ ಪ್ರಾಥಮಿಕ ಶಾಲೆ ಹಾಗೂ ಸರ್ಕಾರಿ ಪ್ರೌಢಶಾಲೆಯನ್ನು ವಿಲೀನಗೊಳಿಸಿ ಇದನ್ನು ಸರ್ಕಾರಿ ಸಂಯುಕ್ತ ಪ್ರೌಢಶಾಲೆಯೆಂದು ಪದನಾಮೀಕರಿಸಿದರಿಂದ, ಇವುಗಳ ಸುಗಮ ಕಾರ್ಯ ನಿರ್ವಹಣೆಗಾಗಿ ಪ್ರಾಥಮಿಕ ಶಾಲೆಯ ಮುಖ್ಯಗುರುಗಳು ಹಾಗೂ ಸಂಯುಕ್ತ ಪ್ರೌಢಶಾಲೆಯ ಮುಖ್ಯಸ್ಥರು ನಿರ್ವಹಿಸಬೇಕಾದ ವಿವಿಧ ಕರ್ತವ್ಯ ಹಾಗೂ ಜವಾಬ್ದಾರಿಗಳು **ಅನುಬಂಧ "ಅ" ಹಾಗೂ "ಬ"** ದಲ್ಲಿ ವಿವರಿಸಲಾಗಿದೆ. ಈ ಅಧಿಕಾರ ವ್ಯಾಪ್ತಿಯಂತೆ ಆಯಾ ವಿಭಾಗದವರು ಅಧಿಕಾರ ಚಲಾಯಿಸಬಹುದಾದರೂ ಇದು ಸಮಗ್ರ ಶಾಲೆಯ ಅಭಿವೃದ್ಧಿಗಾಗಿ ಎಂಬುದನ್ನು ಗಮನಿಸುವುದು ಗಮನಾರ್ಹ ಅಂಶ.

**5. ಹಾಜರಾತಿ. :–** ಪ್ರಸ್ತುತ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿಯ ವ್ಯವಸ್ಥೆಯಂತೆ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮತ್ತು ಪ್ರೌಢಶಾಲೆಯ ಸಿಬ್ಬಂದಿಯ ಹಾಜರಾತಿ ವಹಿಯನ್ನು ಪ್ರತ್ಯೇಕವಾಗಿ ಆಯಾ ಶಾಲೆಯ ಮುಖ್ಯ ಶಿಕ್ಷಕರು ನಿರ್ವಹಿಸುವುದು. ಆದರೆ ಇವುಗಳ ಸಂಪೂರ್ಣ ಮೇಲ್ವಿಚಾರಣೆ ಸಂಯುಕ್ತ ಪ್ರೌಢಶಾಲೆಗಳ ಮುಖ್ಯ ಶಿಕ್ಷಕರು ನಿರ್ವಹಿಸುವರು. ಸಂಯುಕ್ತ ಪ್ರೌಢಶಾಲೆಯ ವೇಳಾಪಟ್ಟಿ ಸಹ ಅವಶ್ಯವಾದ ಹಾಗೂ ಶಿಕ್ಷಕರಿಗೆ ಸಂಬಂಧಪಟ್ಟ ವಿಷಯಕ್ಕೆ ಸೀಮಿತವಾಗಿರುತ್ತದೆ. ಉಳಿದಂತೆ ಪ್ರತ್ಯೇಕವಾಗಿ ಸಿದ್ದಪಡಿಸುವುದು. ಆಯಾ ಶಾಲೆಯ ಮುಖ್ಯ ಶಿಕ್ಷಕರ ಅವರವರಿಗೆ ಪ್ರದತ್ತವಾದ ಅಧಿಕಾರ ಮತ್ತು ಹೊಣೆಗಾರಿಕೆಯನ್ನು ನಿರ್ವಹಿಸುವುದು. ಪಠ್ಯ ಮತ್ತು ಪಠ್ಯೇತರ ಚಟುವಟಿಕೆಗಳ ಅವಲೋಕನ ಮೇಲುಸ್ತುವಾರಿ ಹಾಗೂ ಸಮನ್ವಯತೆಯನ್ನು ಕಾಪಾಡುವ ಹೊಣೆಗಾರಿಕೆಯನ್ನು ಆಯಾ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರದ್ದಾಗಿರುತ್ತದೆ. ಆಯಾ ವಿಭಾಗದ ಮುಖ್ಯಸ್ಥರು ಶಿಕ್ಷಣದ ಗುಣಮಟ್ಟ ಕಾಯುವಹೊಣೆಗಾರಿಕೆ ಹೊಂದಿರುತ್ತಾರೆ. ಆದರೆ ಸಂಯುಕ್ತ ಪ್ರೌಢಶಾಲೆಯ ಮುಖ್ಯಸ್ಥರಾಗಿ ಉತ್ತಮ ಗುಣಮಟ್ಟದ ಶಿಕ್ಷಣಕ್ಕೆ ಬದ್ಧತೆಹೊಂದುವರು. ಅವಶ್ಯಕತೆ ಅನುಗುಣವಾಗಿ ಪ್ರೌಢಶಾಲಾ ಶಿಕ್ಷಕರು 6 ಮತ್ತು 7 ನೇ ತರಗತಿಗಳಿಗೆ ಗಣಿತ,ವಿಜ್ಞಾನ ಹಾಗೂ ಇಂಗ್ಲೀಷ್ ವಿಷಯಗಳನ್ನು ಬೋಧಿಸುವುದು. ಇಷ್ಟಕ್ಕೆ ಸೀಮಿತಗೊಂಡ ಸಂಯುಕ್ತ ವೇಳಾಪಟ್ಟಿ, ಸಂಯುಕ್ತ ಪ್ರೌಢಶಾಲೆಯ ಮುಖ್ಯಸ್ಥರು ನಿರ್ವಹಿಸಿರುತ್ತಾರೆ. ಉಳಿದ ತರಗತಿಗಳ ಹಾಗೂ ಉಳಿದ ಶಿಕ್ಷಕರ ವೇಳಾಪಟ್ಟಿ ಆಯಾ ಶಾಲೆಯ ಮುಖ್ಯ ಗುರುಗಳು ನಿರ್ವಹಿಸುವರು.

6. ಪ್ರಾಥಮಿಕ ಶಾಲೆಯ ಮುಖ್ಯಗುರುಗಳು ಸಾಮರ್ಥ್ಯ ಆಧಾರಿತ ಬೋಧನಾ ಚಟುವಟಿಕೆಗಳಲ್ಲಿ ವಿಶೇಷ ತರಬೇತಿ ಪಡೆದಿರುವುದರಿಂದ 1 ರಿಂದ 5 ನೇ ತರಗತಿಯ ಶೈಕ್ಷಣಿಕ ಮೇಲ್ವಿಚಾರಣೆಯನ್ನು ಅವರೇ ನಿರ್ವಹಿಸುವುದು.

7. ವಿಶೇಷ ಶಿಕ್ಷಕರ ಸೇವೆಯನ್ನು ಶಾಲೆಯ ಸಮಗ್ರ ಅಭಿವೃದ್ಧಿಗಾಗಿ ಉಪಯೋಗಿಸುವುದು.

8. ವಾಚನಾಲಯ, ಪ್ರಯೋಗಾಲಯ ಹಾಗೂ ಇತರೆ ಸೌಕರ್ಯಗಳನ್ನು ಸಂಯುಕ್ತ ಪ್ರೌಢಶಾಲೆಯ ಮುಖ್ಯ ಗುರುಗಳು ಎಲ್ಲಾ ಮಕ್ಕಳ ಅನುಕೂಲಕ್ಕಾಗಿ ಉಪಯೋಗಿಸುವುದು.

9. ವಿದ್ಯಾರ್ಥಿ ವೇತನದ ವಿವರಗಳನ್ನು ಆಯಾ ವಿಭಾಗದ ಮುಖ್ಯ ಗುರುಗಳು ನಿರ್ವಹಿಸುತ್ತಾರೆ. ಈ ಹಣವನ್ನು ಎಸ್.ಡಿ.ಎಂ.ಸಿ.ಹಾಗೂ ತರಗತಿಗಳ ಶಿಕ್ಷಕರ ಸಮ್ಮುಖದಲ್ಲಿ ವಿತರಿಸುವುದು.

10. ಸಂಯುಕ್ತ ಪ್ರೌಢಶಾಲೆಗಳ ಎಲ್ಲಾ ಸಿಬ್ಬಂದಿ ವೇತನ ಬಟವಾಡೆಯನ್ನು ಸಂಯುಕ್ತ ಪ್ರೌಢಶಾಲೆ ಮುಖದ ಶಿಕ್ಷಕರಿಗೆ ನೀಡಿಲಾಗಿದ್ದು, ಈ ಶಾಲೆಗಳನ್ನು ಕ್ಲಸ್ಟರ್ ವ್ಯವಸ್ಥೆಯಿಂದ ಹೊರತುಪಡಿಸಲಾಗಿದೆ.

11. ಕಾಲಮಿತಿ ಬಡ್ತಿ, ಸ್ವಯಂಚಾಲಿತ ಬಡ್ತಿ, 20 ವರ್ಷದ ವಿಶೇಷ ಬಡ್ತಿಗಳ ಮಂಜೂರಾತಿಗಾಗಿ ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸಿ ಮಂಜೂರು ಪಡೆಯುವುದು.

12. ರಾಷ್ಟ್ರಗೀತೆ, ದೇಶಭಕ್ತಿ ಗೀತೆ, ರಾಷ್ಟ್ರದ ಸ್ವಾತಂತ್ರ್ಯತೆ, ಸಮಗ್ರತೆ, ಸೌರ್ವಭೌಮತ್ವ, ಏಕತೆ, ಐಕ್ಯತೆ, ಭಾವೈಕ್ಯತೆ, ರಾಷ್ಟ್ರಪ್ರೇಮ, ಶಿಸ್ತು, ವಿಜ್ಞಾನ ಇವುಗಳ ಬಗ್ಗೆ ತರಗತಿಗಳಲ್ಲಿ ಮಕ್ಕಳ ಮನಮುಟ್ಟುವಂತೆ ರೂಢಿಸಿ ಅವರನ್ನು ರಾಷ್ಟ್ರಾಭಿಮಾನಿಗಳನ್ನಾಗಿ ಮಾಡಲು ಯತ್ನಿಸಬೇಕು. ಹಾಗೂ ಇವುಗಳ ಬಗ್ಗೆ ರಸಪ್ರಶ್ನೆ ಕಾರ್ಯಕ್ರಮಗಳನ್ನೂ ತಿಂಗಳಿಗೆ ಒಮ್ಮೆಯಾದರೂ ವ್ಯವಸ್ಥೆ ಮಾಡಬೇಕು.

13. ಒಟ್ಟಿನಲ್ಲಿ ಮುಖ್ಯೋಪಾಧ್ಯಾಯರು ಮುಖ್ಯೋಪಾಧ್ಯಾನಿಯರು ತಾವು ಕೆಲಸ ಮಾಡುವ ಶಾಲೆಯ **"ನಾಯಕರಾಗಿ, ಮಾರ್ಗದರ್ಶಕರಾಗಿ ಉಪಾಧ್ಯಾಯರ ಹಾಗೂ ಮಕ್ಕಳಹಿತೈಷಿಗಳಾಗಿ ಸಾರ್ವಜನಿಕರ ಬಂಧುವಾಗಿ ಶಾಲೆಯ ಸರ್ವತೋಮುಖ ಅಭಿವೃದ್ಧಿಯನ್ನು ಸಾಧಿಸುವ ಹೊಣೆ ಹೊತ್ತಿರುತ್ತಾರೆ." ಶಾಲೆಯ "ಸರ್ವಾಂಗೀಣ ಬೆಳವಣಿಗೆ"** ಸಂಯುಕ್ತ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರು ಪ್ರಭಾವ ವಲಯದ ಪ್ರಭಾವಯುತ ಪ್ರತಿಭೆಯ ಪ್ರತೀಕವೆಂದು ತಿಳಿಯಬೇಕು.

14. ಲೋಕಲ್ ಹಾಲಿಡೇಸ್, (ಸ್ಥಳೀಯ ರಜೆ) ಘೋಷಣೆ ಬಗ್ಗೆ ಪ್ರಾಥಮಿಕ ವಿಭಾಗದ ಮುಖ್ಯ ಶಿಕ್ಷಕರು ಹಾಗೂ ಪ್ರೌಢಶಾಲಾ ವಿಭಾಗದ ಮುಖ್ಯ ಶಿಕ್ಷಕರು ಜಂಟಿ ಸಮ್ಮತಿಯೊಂದಿಗೆ ಸಮಾಲೋಚಿಸಿ ನಿಗಧಿಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯ ಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎನ್.ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ

**ಅನುಬಂಧ 'ಅ'**

**(ಪ್ರಾಥಮಿಕ ವಿಭಾಗ)**

**ಸರ್ಕಾರಿ ಸಂಯುಕ್ತ ಪ್ರೌಢಶಾಲೆಯ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರ ಕಾರ್ಯ ವ್ಯಾಪ್ತಿಗಳು.**

1. ಪ್ರಾಥಮಿಕ ಶಾಲಾ ಶಿಕ್ಷಕರ ಸಾಂದರ್ಭಿಕ ರಜೆ ಮತ್ತು ನಿರ್ಭಂದಿತ ರಜೆ ಮಂಜೂರು ಮಾಡಲು ಅಧಿಕಾರ ಹೊಂದಿರುತ್ತಾರೆ.

2. ಈ ವಿಭಾಗದ ವೇಳಾ ಪಟ್ಟಿ ಸಿದ್ದ ಪಡಿಸುವುದು.

3. ಈ ವಿಭಾಗದ ಮುಖ್ಯಸ್ಥರು ಶಿಕ್ಷಕರ ಬೋಧನೆ, ಪರಿಹಾರ ಬೋಧನೆ, ನಲಿ–ಕಲಿ ಹಾಗೂ ಇನ್ನಿತರ ಶೈಕ್ಷಣಿಕ ಕಾರ್ಯಕ್ರಮಗಳ ಮೇಲ್ವಿಚಾರಣೆ ಮಾರ್ಗದರ್ಶನ ನಿಯತಿಕವಾಗಿ ಮಾಡುವ ಅಧಿಕಾರ ಹೊಂದಿರುತ್ತಾರೆ.

4. ಸರ್ಕಾರಿ ಸರ್ಕಾರೇತರ ಕರೀದಿ ಪುಸ್ತಕ ನಿರ್ವಹಣೆ ಇವರದ್ದಾಗಿರುತ್ತದೆ.

5. ಪ್ರಾಥಮಿಕ ಶಾಲೆಯ ಎಸ್.ಡಿ.ಎಂ.ಸಿ ರಚನೆಯಂತೆ, ಮುಖ್ಯ ಗುರುಗಳು ಎಸ್.ಡಿ.ಎಂ.ಸಿ ಕಾರ್ಯದರ್ಶಿಯಾಗಿರುವುದರಿಂದ ತತ್ಪರಿಣಾಮವಾದ/ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾರೆ.

6. ಪ್ರತಿ ವಾರಕ್ಕೆ ಕನಿಷ್ಠ ಇಬ್ಬರು ಶಿಕ್ಷಕರ ಪಾಠ ಬೋಧನಾ ಟಿಪ್ಪಣಿಯಂತೆ ಮೇಲ್ವಿಚಾರಣೆ ಮಾಡಿ ಮಾರ್ಗದರ್ಶನ ನೀಡುವುದು ಈ ಅಂಶವನ್ನು ಮೇಲ್ವಿಚಾರಣೆ ವಹಿಯಲ್ಲಿ ದಾಖಲಿಸುವುದು.

7. ವಾರಕ್ಕೆ ನಿಗದಿತ 25 ಅವಧಿಗಳಂತೆ ಪ್ರಾಥಮಿಕ ಮುಖ್ಯ ಶಿಕ್ಷಕರ ನಿಗಧಿತ ಬೋಧನಾ ಅವಧಿಯಂತೆ ಬೋಧನಾ ವಿಷಯಗಳನ್ನು ಭೋದಿಸುವುದು ಕಡ್ಡಾಯವಾಗಿರುತ್ತದೆ.

8. ಇಲಾಖೆಯಿಂದ ದೊರೆಯುವ ಪ್ರೋತ್ಸಾಹದಾಯಕ ಸೌಕರ್ಯಗಳಾದ ವಿದ್ಯಾರ್ಥಿ ವೇತನ, ಸಮವಸ್ತ್ರ, ಪಠ್ಯ ಪುಸ್ತಕ, ಶಾಲಾ ಬ್ಯಾಗು, ನೋಟ್ ಪುಸ್ತಕ, ಜಾಮಿಂಟ್ರಿ ಬಾಕ್ಸ್ ಇತ್ಯಾದಿಗಳನ್ನು ಗುರುತಿಸಲ್ಪಟ್ಟು ಫಲಾನುಭವಿ ವಿದ್ಯಾರ್ಥಿಗಳಿಗೆ ನೀಡಿ ದಾಖಲೆ ನಿರ್ವಹಿಸುವುದು.

9. ಎಸ್.ಡಿ.ಎಂ.ಸಿ ರಚನೆಯಂತೆ ಪದತ್ತವಾದ ಅಧಿಕಾರದಂತೆ ಶಾಲೆಯಲ್ಲಿನ ಅನುಪಯುಕ್ತ ವಸ್ತುಗಳನ್ನು ವಿಲೇಮಾಡಿ ಬಂದ ಹಣವನ್ನು ಶಾಲೆಯ ಶೈಕ್ಷಣಿಕ ಅಭಿವೃದ್ಧಿಗೆ ಬಳಸಿಕೊಳ್ಳುವುದು.

10. ಮಕ್ಕಳಿಗೆ ನೀಡಿದ ಗೃಹ ಪಾಠವನ್ನು ಮುಖ್ಯ ಗುರುಗಳು ಆಯಾ ತರಗತಿಯ ವಿಷಯ ಬೋಧಕ ಶಿಕ್ಷಕರುಗಳ ಕನಿಷ್ಠ ಒಂದು ಪ್ರತಿಶತ ಪುನರ್ ಪರಿಶೀಲನೆ ಮಾಡುವುದು ಹಾಗೂ ದಾಖಲೀಕರಿಸುವುದು.

11. ಮಕ್ಕಳ ಕಲಿಕಾ ಪ್ರಗತಿಗೆ ದಾಯಿತ್ವಹೊಂದಿರುತ್ತಾರೆ.

**ಎಂ.ಎನ್.ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ

**ಅನುಬಂಧ 'ಬ'**

**ಸರ್ಕಾರಿ ಸಂಯುಕ್ತ ಪ್ರೌಢಶಾಲೆಯ ಮುಖ್ಯಶಿಕ್ಷಕರ ಕಾರ್ಯ ವ್ಯಾಪ್ತಿಗಳು**

1. ಮುಖ್ಯ ಗುರುಗಳು ಶೈಕ್ಷಣಿಕ ವರ್ಷ ಪ್ರಾರಂಭವಾಗುವ ಮೊದಲು ಶಾಲೆಯ ಕ್ಯಾಲೆಂಡರನ್ನು ತಯಾರಿಸುವುದು. ಇದರಲ್ಲಿ 1) ಅಭ್ಯಾಸ ಅಂದಾಜು ಪತ್ರಿಕೆ, 2)ಸಾಂಸ್ಕೃತಿಕ ಚಟುವಟಿಕೆ 3) ಶಾರೀರಿಕ ಶಿಕ್ಷಣದ ಚಟುವಟಿಕೆಗಳ ಕಾರ್ಯಕ್ರಮ, 4) ಶೈಕ್ಷಣಿಕ ಪ್ರವಾಸ 5) ಶಾಲೆಯ ವಾರ್ಷಿಕೋತ್ಸವಗಳು ಮುಂತಾದವುಗಳು ಒಳಗೊಂಡಿರುತ್ತವೆ.

2. ಸಹಾಯಕ ಶಿಕ್ಷಕರ ಸಭೆಯನ್ನು ವರ್ಷದ ಪಾರಂಭದಲ್ಲಿ ಕರೆದು ವಾರ್ಷಿಕ ಕಾರ್ಯಕ್ರಮಗಳ ಯೋಜನೆಗಳನ್ನೂ ಶಿಕ್ಷಕರಲ್ಲಿ ಅವರವರ ಆಸಕ್ತಿ ಹಾಗೂ ಅರ್ಹತೆಗೆ ತಕ್ಕಂತೆ ಹಂಚಿಕೊಡುವುದು.

3. ಶಿಕ್ಷಕರ ಸಹಾಯದಿಂದ ತರಗತಿಗಳ, ಗೃಹಕಾರ್ಯದ ಹಾಗೂ ಶಾಲೆಯ ಕ್ರೋಢಿಕೃತ ವೇಳಾಪಟ್ಟಿಯನ್ನು ತಯಾರಿಸುವುದು.

4. ಸರ್ಕಾರಿ ಸಂಯುಕ್ತ ಪ್ರೌಢಶಾಲೆಯ ಸಮಗ್ರ ಶಾಲಾ ಹಾಗೂ ಶೈಕ್ಷಣಿಕ ಪರಿಸರ ಕಾಯ್ದುಕೊಳ್ಳುವ ಜವಾಬ್ದಾರಿ ಈ ಶಾಲೆಯ ಮುಖ್ಯ ಶಿಕ್ಷಕರದ್ದಾಗಿರುತ್ತದೆ.

5. ಮುಖ್ಯ ಗುರುಗಳು ಅವರಿಗೆ ನಿಗಧಿ ಪಡೆಸಿದ ವಾರದ ಅವಧಿಗಳು ಕಡ್ಡಾಯವಾಗಿ ಬೋಧಿಸಬೇಕು ಹಾಗೂ ಅವು ಬೋಧನಾ ವಿಷಯಗಳಾಗಿರಬೇಕು.

6. ಸಹ ಶಿಕ್ಷಕರ ಮಾಸಿಕ ಸಭೆಯನ್ನು ಕರೆದು ಮಹತ್ವದ ವಿಷಯಗಳನ್ನೂ ಚರ್ಚಿಸಿ ಮಾರ್ಗದರ್ಶನ ನೀಡುವುದು.

7. ಶಾಲೆಯಲ್ಲಿ ತೆಗೆದುಕೊಳ್ಳಬೇಕಾದ ಮಾಸಿಕ ಕಿರು ಪರೀಕ್ಷೆ; ಸೆಮಿಸ್ಟರ್ ಪರೀಕ್ಷೆಗಳ ಬಗ್ಗೆ ಮುಂಚಿತವಾಗಿ ವಿದ್ಯಾರ್ಥಿಗಳಿಗೆ ತಿಳಿಸುವುದು ಪ್ರಗತಿಯ ವಿಶ್ಲೇಷಣೆ ಶಿಕ್ಷಕರೊಂದಿಗೆ ಹಂಚಿಕೊಳ್ಳುವುದು.

8. ದೈನಂದಿನ ಚಟುವಟಿಕೆಗಳಾದ ಸ್ವಚ್ಛತೆ, ಪ್ರಾರ್ಥನೆ ಮತ್ತು ಸಾಮೂಹಿಕ ಕವಾಯಿತಿನ ಮೇಲ್ವಿಚಾರಣೆ ಮಾಡುವುದು ಕಡ್ಡಾಯ.

9. ಸಾಂಸ್ಕೃತಿಕ ಚಟುವಟಿಕೆಗಳು ವಾರ್ಷಿಕೋತ್ಸವವನ್ನು ಶಾಲಾ ವಿಜ್ಞಾನ ಕಲಾ ಪ್ರದರ್ಶನಗಳನ್ನೂ ಏರ್ಪಡಿಸಿ ಸಾರ್ವಜನಿಕರು ಹಾಗೂ ಪಾಲಕರು ಪಾಲ್ಗೊಳ್ಳುವಂತೆ ನೋಡಿಕೊಳ್ಳವುದು.

10. ಪಠ್ಯೇತರ ಚಟುವಟಿಕೆಗಳು ಸಮಗ್ರ ಶಾಲೆಯ ಅಭಿವೃದ್ಧಿಗಾಗಿ ಅನುಷ್ಠಾನಗೊಳಿಸುವುದು.

11. ಮಕ್ಕಳ ವೈದ್ಯಕೀಯ ಪರೀಕ್ಷೆ ಮಾಡಿಸುವುದು, ಮುಖ್ಯ ಗುರುಗಳ ದಿನಚರಿ, ಅಭ್ಯಾಸ ವಿಷಯಗಳ ಹಂಚಿಕೆ, ಪಠ್ಯೇತರ ವಿಷಯಗಳ ಸಂಯೋಜನೆ, ಪ್ರಯೋಗಾಲಯ, ವಾಚನಾಲಯ ಮತ್ತು ಪದರ್ಶನಾಲಯ ಮುಂತಾದವುಗಳ ಸಂಘಟನೆ, ಶಾಲೆಯ ತೋಟ, ಕೀಡಾ ಮೈದಾನ, ಸಲಕರಣೆಗಳು ಇತ್ಯಾದಿಗಳ ವ್ಯವಸ್ಥೆ ಇವೆಲ್ಲ ಮುಖ್ಯಾಪಾಧ್ಯಾಯರ ಹೊಣೆಗಾರಿಗಳಾಗಿರುತ್ತವೆ.

12. ಶಿಕ್ಷಕರ ಪಾಲಕರ ಸಭೆ ಕಾಲಕಾಲಕ್ಕೆ ನಡೆಸುವುದು ಹಾಗೂ ಮಕ್ಕಳು ಸಾಧಿಸಿದ ಸಾಧನೆಯನ್ನು ಪಾಲಕ/ಪೋಷಕರಿಗೆ ಬಿಂಬಿಸಿ ಶಾಲೆಗೆ ಆಕರ್ಷಿಸುವುದು.

**ಎಂ.ಎನ್.ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ
**ಶಿಕ್ಷಣ ಇಲಾಖೆ.**

ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಮಾರ್ಚ್ ೧೨, ೨೦೦೯ (ಫಾಲ್ಗುಣ ೨೧, ಶಕ ವರ್ಷ ೧೯೩೦) | ನಂ. ೧೪೭ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**
**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ರಾಜ್ಯದ ಗ್ರಾಮ ಪಂಚಾಯತಿ ಸದಸ್ಯರುಗಳಿಗೆ ಗೌರವಧನ ನೀಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ:155:ಜಿಪಸ:2003, ದಿ:1–8–2003
2) ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ:214:ಜಿಪಸ:2008, ದಿ:22–8–2008
3) ಸರ್ಕಾರದ ಆದೇಶ ಸಂ:ಆಇ:591:ಬಿಆರ್‌ಎಸ್:2008, ದಿ:7–2–2009

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಸರ್ಕಾರದ ಆದೇಶದಲ್ಲಿ ಜಿಲ್ಲಾ ಪಂಚಾಯತ್ ತಾಲ್ಲೂಕು ಪಂಚಾಯತ್ ಹಾಗೂ ಗ್ರಾಮ ಪಂಚಾಯತಿ ಅಧ್ಯಕ್ಷರು ಮತ್ತು ಉಪಾಧ್ಯಕ್ಷರುಗಳಿಗೆ ಗೌರವ ಧನ ಉಪವೇಶನ ಶುಲ್ಕ ಹಾಗೂ ಜಿಲ್ಲಾ ಪಂಚಾಯತ್ ಹಾಗೂ ತಾಲ್ಲೂಕು ಪಂಚಾಯತ್ ಸದಸ್ಯರುಗಳಿಗೆ ಉಪವೇಶನ ಶುಲ್ಕ ನಿಗದಿಗೊಳಿಸಿ ಅದನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯತ್ : ತಾಲ್ಲೂಕು ಪಂಚಾಯತ್ ಮತ್ತು ಗ್ರಾಮ ಪಂಚಾಯತ್‌ಗಳು ತಮ್ಮ ಸಂಪನ್ಮೂಲಗಳಿಂದ ಭರಿಸುವಂತೆ ಆದೇಶಿಸಲಾಗಿದೆ.

2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ರಾಜ್ಯದ ಗ್ರಾಮ ಪಂಚಾಯತಿ ಸದಸ್ಯರಿಗೆ ಮಾಸಿಕ ಗೌರವ ಧನವನ್ನು ನೀಡುವ ಬಗ್ಗೆ ಘೋಷಣೆ ಮಾಡಿರುವ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿ ಗ್ರಾಮ ಪಂಚಾಯತ್ ಸದಸ್ಯರ ಗೌರವ ಧನವನ್ನು ಮಾಸಿಕ ರೂ. 250/– ರಂತೆ ದಿ:1–9–2008ರಿಂದ ಜಾರಿಗೆ ಬರುವಂತೆ ನಿಗದಿಪಡಿಸಿ ಗ್ರಾಮ ಪಂಚಾಯತ್ ಸಂಪನ್ಮೂಲದಿಂದ ಭರಿಸುವಂತೆ ಆದೇಶ ಹೊರಡಿಸಲಾಗಿತ್ತು. ಆದರೆ ಈ ಮಧ್ಯೆ ಗ್ರಾಮ ಪಂಚಾಯತಿಗಳ ಸಂಪನ್ಮೂಲದಿಂದ ಗೌರವ ಧನ ನೀಡಲು ಸಾಧ್ಯವಾಗದಿರುವ ಪ್ರಯುಕ್ತ ಸರ್ಕಾರದಿಂದ ಅನುದಾನ ಒದಗಿಸುವಂತೆ ಕೋರಿಕೆಗಳು ಸರ್ಕಾರದಲ್ಲಿ ಸ್ವೀಕೃತವಾಗಿದ್ದರ ಹಿನ್ನೆಲೆಯಲ್ಲಿ, ಆರ್ಥಿಕ ಇಲಾಖೆಯ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರದ ಆದೇಶದಲ್ಲಿ ಗ್ರಾಮ ಪಂಚಾಯತಿ ಸದಸ್ಯರುಗಳಿಗೆ ಮಾಸಿಕ ಗೌರವಧನವಾಗಿ ರೂ. 250/– ಗಳನ್ನು ಸರ್ಕಾರದಿಂದ ಒದಗಿಸಲು ಹಾಗೂ ದಿನಾಂಕ : 1.9.2008ರ ರಿಂದ 31.3.2009 ರವರೆಗೆ 7 ತಿಂಗಳುಗಳ ಗೌರವಧನ ನೀಡಲು ಅಗತ್ಯವಿರುವ ಒಟ್ಟು ಅನುದಾನ ರೂ. 11.51 ಕೋಟಿ ಹೆಚ್ಚುವರಿ ಅನುದಾನವನ್ನು ಲೆಕ್ಕ ಶೀರ್ಷಿಕೆ 2515–00–198–1–07–300 (ಲಿಂಕ್ ಡಾಕ್ಯುಮೆಂಟ್ ಹೆಡ್ 2515–00–101–0–18) (ಯೋಜನೆ) ರಲ್ಲಿ ಒದಗಿಸಿರುತ್ತದೆ.

ರಾಜ್ಯದ ಗ್ರಾಮ ಪಂಚಾಯತಿ ಸದಸ್ಯರುಗಳಿಗೆ ಬಿಡುಗಡೆಯಾಗುವ ಸರ್ಕಾರದ ಅನುದಾನವನ್ನು ರಾಜ್ಯ ಹುಜೂರು ಖಜಾನೆಯಿಂದ ಪೇಯೀಸ್ ರಸೀದಿ ನೀಡಿ ಮೇಲೆ ಪಡೆದು ರಾಷ್ಟ್ರೀಕೃತ ಬ್ಯಾಂಕುಗಳ ಮುಖಾಂತರ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಮೂಲಕ ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿದೆ.

ಅದರಂತೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 214 ಜಿಪಸ 08, ಬೆಂಗಳೂರು, ದಿನಾಂಕ : 25.02.2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದ ಗ್ರಾಮ ಪಂಚಾಯತಿ ಸದಸ್ಯರುಗಳಿಗೆ ಪ್ರತಿ ಸದಸ್ಯನಿಗೆ ಮಾಸಿಕ ರೂ. 250/– ರಂತೆ (ಎರಡು ನೂರ ಐವತ್ತು ರೂಪಾಯಿಗಳು ಮಾತ್ರ) ರಾಜ್ಯದ ಒಟ್ಟು 5628 ಗ್ರಾಮ ಪಂಚಾಯತಿಗಳಲ್ಲಿನ ಒಟ್ಟು 91,402 ಸದಸ್ಯರುಗಳಿಗೆ 2008–09ನೇ ಸಾಲಿನಲ್ಲಿ ದಿ:1–9–2008 ರಿಂದ 31–3–2009ರ ವರೆಗೆ 7 ತಿಂಗಳುಗಳಿಗೆ ಪಾವತಿಸಬೇಕಾಗಿರುವುದರಿಂದ ಹಾಗೂ ಲೆಕ್ಕ ಶೀರ್ಷಿಕೆ 2515 ರಲ್ಲಿ ರೂ. 4.52 ಕೋಟಿ (ನಾಲ್ಕು ಕೋಟಿ ಐವತ್ತೆರಡು ಲಕ್ಷ ರೂ. ಗಳು ಮಾತ್ರ) ಲಭ್ಯವಿರುವುದರಿಂದ ಇದರ ಜೊತೆಗೆ ರೂ. 11.51 ಕೋಟಿ (ಹನ್ನೊಂದು ಕೋಟಿ ಐವತ್ತೊಂದು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಲೆಕ್ಕ ಶೀರ್ಷಿಕೆ 2515–00–198–1–07–300 (ಯೋಜನೆ) (ಒಟ್ಟಾರೆ) ಅಡಿ ಹೆಚ್ಚುವರಿಯಾಗಿ ಒದಗಿಸಲಾಗಿದೆ. ಈ ಅನುದಾನದ ಮೊತ್ತವನ್ನು ಪೇಯಿಸ್ ರಸೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಈ ಆದೇಶದೊಂದಿಗೆ ಲಗತ್ತಿಸಿದ ಅನುಬಂಧದಲ್ಲಿ ನಮೂದಿಸಿದಂತೆ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಲು ಕ್ರಮ ಕೈಗೊಳ್ಳತಕ್ಕದ್ದು.

ಈಗಾಗಲೇ ಗ್ರಾಮ ಪಂಚಾಯತ್ ನಿಧಿಯಿಂದ ಗೌರವ ಧನ ಬಿಡುಗಡೆ ಮಾಡಿದ್ದಲ್ಲಿ, ಅದನ್ನು ಈ ಅನುದಾನದಲ್ಲಿ ಗ್ರಾಮ ಪಂಚಾಯತ್ ನಿಧಿಗೆ ಸರಿದೂಗಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಆಇ91ಬಿಆರ್ಎಸ್2008 ದಿ:7–2–2009 ಮತ್ತು ಆರ್ಥಿಕ ಇಲಾಖೆ ಟಿಪ್ಪಣಿ ಸಂ:ಆಇ:55:ವೆಚ್ಚ–6:2009 ದಿ:11–2–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸ್ವರ್ಣಲತ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿಗಳು (ಪಂ. ರಾಜ್)
ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

**ಸರ್ಕಾರಿ ಆದೇಶ ಸಂ:ಗ್ರಾಅಪ:214:ಜಿಪಸ:08 ದಿ : 25–2–2009ರ**
**ಅನುಬಂಧ**

| ಕ್ರಮ ಸಂ. | ಜಿಲ್ಲಾ ಪಂಚಾಯತ್ ಹೆಸರು | ಗ್ರಾಮ ಪಂಚಾಯತ್ ಸಂಖ್ಯೆ | ಒಟ್ಟು ಗ್ರಾ.ಪಂ. ಸದಸ್ಯರ ಸಂಖ್ಯೆ | ಪ್ರತಿ ಸದಸ್ಯರಿಗೆ ಮಾಸಿಕ ರೂ. 250/– ರಂತೆ 1–9–2008 ರಿಂದ 31–3–2009ರ ವರೆಗೆ ಲಭ್ಯವಾಗುವ ಗೌರವಧನ ರೂ. ಗಳಲ್ಲಿ |
|---|---|---|---|---|
| 1. | ಬಾಗಲಕೋಟೆ | 163 | 2961 | 51,81,750.00 |
| 2. | ಬೆಂಗಳೂರು (ನ) | 86 | 2426 | 42,45,500.00 |
| 3. | ಬೆಂಗಳೂರು (ಗ್ರಾ) | 98 | 1644 | 28,77,000.00 |
| 4. | ಬೆಳಗಾಂ | 485 | 8475 | 1,48,31,250.00 |
| 5. | ಬಳ್ಳಾರಿ | 189 | 3405 | 59,58,750.00 |
| 6. | ಬೀದರ್ | 175 | 2972 | 52,01,000.00 |
| 7. | ಬಿಜಾಪುರ | 199 | 3626 | 63,45,500.00 |
| 8. | ಚಾಮರಾಜನಗರ | 120 | 2061 | 36,06,750.00 |
| 9. | ಚಿಕ್ಕಮಗಳೂರು | 226 | 2405 | 42,08,750.00 |
| 10. | ಚಿತ್ರದುರ್ಗ | 185 | 3223 | 56,40,250.00 |
| 11. | ದಕ್ಷಿಣ ಕನ್ನಡ | 203 | 3275 | 57,31,250.00 |
| 12. | ದಾವಣಗೆರೆ | 230 | 3267 | 57,17,250.00 |
| 13. | ಧಾರವಾಡ | 127 | 1863 | 32,60,250.00 |
| 14. | ಗದಗ | 106 | 1624 | 28,42,000.00 |
| 15. | ಗುಲ್ಬರ್ಗಾ | 337 | 5926 | 1,03,70,500.00 |
| 16. | ಹಾಸನ | 258 | 3711 | 64,94,250.00 |
| 17. | ಹಾವೇರಿ | 208 | 2963 | 51,85,250.00 |
| 18. | ಕೊಡಗು | 98 | 1250 | 21,87,500.00 |
| 19. | ಕೋಲಾರ | 156 | 2543 | 44,50,250.00 |
| 20. | ಕೊಪ್ಪಳ | 134 | 2604 | 45,57,000.00 |
| 21. | ಮಂಡ್ಯ | 232 | 2835 | 67,11,250.00 |
| 22. | ಮೈಸೂರು | 235 | 4300 | 75,25,000.00 |
| 23. | ರಾಯಚೂರು | 164 | 3276 | 57,33,000.00 |

| ಕ್ರಮ ಸಂ. | ಜಿಲ್ಲಾ ಪಂಚಾಯತ್ ಹೆಸರು | ಗ್ರಾಮ ಪಂಚಾಯತ್ ಸಂಖ್ಯೆ | ಒಟ್ಟು ಗ್ರಾ.ಪಂ. ಸದಸ್ಯರ ಸಂಖ್ಯೆ | ಪ್ರತಿ ಸದಸ್ಯರಿಗೆ ಮಾಸಿಕ ರೂ. 250/- ರಂತೆ 1-9-2008 ರಿಂದ 31-3-2009ರ ವರೆಗೆ ಲಭ್ಯವಾಗುವ ಗೌರವಧನ ರೂ. ಗಳಲ್ಲಿ |
|---|---|---|---|---|
| 24. | ಶಿವಮೊಗ್ಗ | 260 | 2804 | 49,07,000.00 |
| 25. | ತುಮಕೂರು | 321 | 5362 | 93,83,500.00 |
| 26. | ಉಡುಪಿ | 146 | 2398 | 41,96,500.00 |
| 27. | ಉತ್ತರ ಕನ್ನಡ | 206 | 2622 | 45,88,500.00 |
| 28. | ರಾಮನಗರ | 130 | 2101 | 36,76,750.00 |
| 29. | ಚಿಕ್ಕಬಳ್ಳಾಪುರ | 151 | 2359 | 41,28,250.00 |

**ಸ್ವರ್ಣಲತ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿಗಳು (ಪಂ. ರಾಜ್)
ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

## ವಿಶೇಷ ಪತ್ರಿಕೆ

| **ಭಾಗ – IV-A** | **ಬೆಂಗಳೂರು, ಗುರುವಾರ, ಮಾರ್ಚ್ ೧೨, ೨೦೦೯ (ಫಾಲ್ಗುಣ ೨೧, ಶಕ ವರ್ಷ ೧೯೩೦)** | **ನಂ. ೧೪೮** |
|---|---|---|

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ : ಕವಿಪ/ಶಾರಶಾ/263/ಅ.ಮು/2009, ಬೆಂಗಳೂರು, ದಿನಾಂಕ : 27ನೇ ಫೆಬ್ರವರಿ, 2009**

19ನೇ ಫೆಬ್ರವರಿ, 2009ರ ಗುರುವಾರದಂದು ಪ್ರಾರಂಭವಾದ ಕರ್ನಾಟಕ ವಿಧಾನ ಪರಿಷತ್ತಿನ ನೂರ ಬಂಭತ್ತನೆಯ ಅಧಿವೇಶನದ ಮುಂದುವರೆದ ಉಪವೇಶವನ್ನು ದಿನಾಂಕ:27ನೇ ಫೆಬ್ರವರಿ, 2009ರ ಶುಕ್ರವಾರದಂದು ಅನಿರ್ದಿಷ್ಟ ಕಾಲದವರೆಗೆ ಮುಂದೂಡಲಾಯಿತು.

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**LEGISLATIVE COUNCIL SECRETARIAT**
**NOTIFICATION**
**No. KLC/LGC/263/SD/2009, Bangalore, Dated : 27th February 2009**

The Hundred and Ninth Adjourned Session of Karnataka Legislative Council which commenced on Thursday, the 19th February, 2009 stands adjourned sine-die on Friday, the 27th February, 2009.

**V. SHREESH**
Secretary
Karnataka Legislative Council

## ವಿಶೇಷ ಪತ್ರಿಕೆ

| **ಭಾಗ – V** | **ಬೆಂಗಳೂರು, ಶುಕ್ರವಾರ, ಮಾರ್ಚ್ ೧೩, ೨೦೦೯ (ಫಾಲ್ಗುಣ ೨೨, ಶಕ ವರ್ಷ ೧೯೩೦)** | **ನಂ. ೧೪೯** |
|---|---|---|

**FINANCE SECRETARIAT**
**NOTIFICATION**
**No. FD 02 BMB 2008, Date: 13th March, 2009**

Government of Karnataka hereby notifies the sale of Karnataka Government Stock (securities) of 10-year tenure for an aggregate amount of **Rs.2917.00 crore** (Nominal). The sale will be subject to the terms

and conditions spelt out in this notification (called Specific Notification) as also the terms and conditions specified in the revised General Notification No. FD 05 BMB 2007, dated 20th July 2007 of Government of Karnataka.

**Object of the Loan**

1. (i) The Proceeds of the loan will be utilized for financing schemes included in the Annual Plan **2008-09**.

   (ii) Consent of Central Government has been obtained to the floatation of this loan as required by Article 293(3) of the Constitution of India.

**Method of Issue**

2. Government Stock will be sold through the Reserve Bank of India, Mumbai Office (PDO) Fort, Mumbai – 400 001 by auction in the manner as prescribed in paragraph 6.1 of the revised General Notification No FD 05 BMB 2007, dated 20th July 2007 at a coupon rate to be determined by the Reserve Bank of India at the yield based auction under multiple price format.

**Place and Date of Auction**

**3.** The auction will be conducted by the Reserve Bank of India, at its Mumbai Office, Fort, Mumbai on **March 17, 2009**. The application form duly filled in with the bids should be submitted to the aforesaid office on **March 17, 2009 by 12.30 p.m.**

**Result of the Auction**

4. The result of the auction shall be displayed by the Reserve Bank of India at its Mumbai Regional Office, Fort, Mumbai on **March 17, 2009**. The payment by successful bidders will be on **March 18, 2009**.

**Method of Payment**

5. Successful bidders will make payments on **March 18, 2009** before close of banking hours by means of cash, bankers' cheque/pay order, demand draft payable at Reserve Bank of India, Mumbai/ Bangalore or a cheque drawn on their account with RBI, Mumbai (Fort)/Bangalore.

**Tenure**

6. The Stock will be of ten-year tenure. The tenure of the Stock will commence on **March 18, 2009**.

**Date of Repayment**

7. The loan will be repaid at par on **March 18, 2019**

**Rate of Interest**

**8.** The cut-off yield determined at the auction will be the coupon rate percent per annum on the Stock sold at the auction. The interest will be paid every half yearly on **September 18 and March 18.**

**Eligibility of Securities**

9. The investment in Government Stock will be reckoned as an eligible investment in Government Securities by banks for the purpose of Statutory Liquidity Ratio (SLR) under Section 24 of the Banking Regulation Act, 1949. The stocks will qualify for the ready forward facility.

By order and in the name of the Governor of Karnataka,
**M R Sreenivasa Murthy**
Principal Secretary
Finance Department

**Tender Application Form**

**The Regional Director,**
**Reserve Bank of India**
**Public Debt Office**
**Mumbai - 400 001**

**Dear Sir,**

**Tender for 10 year Karnataka Government Stock, 2019 for an aggregate amount of Rs.2917.00 crore. Auction to be held on March 17, 2009**

Pursuant to Government of Karnataka, Finance Department Notification No FD 02 BMB 2008 dated 13th March 2009 and the Tender Notice issued by you, I/We, the undersigned hereby offer to purchase the 10 year Karnataka Government Stock, 2019 on the captioned date as set out below.

| | | |
|---|---|---|
| i) | Name/Constituent's Name | |
| ii) | Address & Telephone No. | |
| iii) | SGL Code, if any | |
| iv) | Current Account No. if any | |
| v) | Nominal value of Stock required | |
| vi) | Yield per cent per annum desired to be earned thereon (expressed up to two decimal points rounded off to multiples of one) | |
| vii) | Name of the Public Debt Office where the SGL account is desired to be credited/Stock issued | Mumbai |
| viii) | Place at which application money will be tendered | Mumbai/Bangalore |
| ix) | Place at which Interest on Stock should be paid | |

**Undertaking**

1. On your acceptance of my/our bid, I/We agree/undertake to immediately collect the letter of acceptance from your Office and to deposit the requisite amount at Reserve Bank of India, Mumbai on the day/time as indicated therein.
2. I/We have read the terms and conditions of bidding for the auction to be held on the captioned date and undertake to abide by them.
3. I/We have also submitted another bid(s)/not submitted any other bid (strike out which is not necessary) for the auction to be held on the captioned date.

Yours faithfully,

Dated:

Signature and Office Stamp of the Bidder/s

($$) If the application is on behalf of a Constituent, indicate the name of the Constituent
*Strike which is not applicable

**Notes**

1. If the applicant's signature is by thumb mark, it should be witnessed by two persons. The full name, occupation and address of the witnesses should be appended to their signature
2. If the application is made in the name of a registered body, the under noted documents, if not already registered at the Public Debt Office, should be submitted by the successful bidder to the Public Debt Office, Reserve Bank of India, Mumbai Office, Fort, Mumbai.

(i). Certificate of Incorporation./Registration in original or a copy thereof certified as true by the issuing authority under his official seal.

(ii) Certified copies of Memorandum and Articles of Association or the rules and regulations/Bye-Laws of the Company/Body

(iii). Certified copy of resolution in favor of person/s authorized to deal in Government securities on behalf of the company/body together with his/their duly attested specimen signature(s).

3. Applicant should also complete a Mandate Form (obtainable from the Public Debt Office, Mumbai) for remittance of half-yearly interest on Stock Certificate/s issued to them.

**Terms and Conditions**

1. The Karnataka Government Stock will be issued for a minimum amount of Rupees ten thousand (face value) and in multiples thereof.
2. Separate tender form should be completed for each bid.

3. Results of the auction would be displayed at Reserve Bank of India, Mumbai Office (Fort), Mumbai.
4. The Reserve Bank of India will have full discretion to accept or reject any or all bids either wholly or partially, if deemed fit, without assigning any reason.
5. Tenderer should check for himself the result of the auction and, if successful, collect the letter of acceptance of the tender from the reserve Bank of India, Mumbai.
6. In the case of accepted tenders, the Karnataka Government Stock would be issued for the nominal amount applied for at a price arrived at with reference to the yield per cent per annum desired to be earned thereon as given in the bid subject to a minimum allotment of Rs.10,000 and further in multiples thereof.
7. The successful bidders will make payment on March 18, 2009 before close of banking hours by means of cash, Bankers Cheque/Pay Order of Demand Draft payable at Reserve Bank of India, Mumbai or a cheque drawn on the account with Reserve Bank of India, Bangalore.
8. The Karnataka Government Stock will be issued to the parties by credit to their Subsidiary General Ledger Account maintained with Reserve Bank of India to those having such accounts and in the form of Stock Certificates to others.

**Illustrations indicating amount payable on**

**investment in Government Stock sold by auction**

The Reserve Bank of India sells Government stock with a tenure of 10 years for an aggregate amount of Rs. 1,000 crore with face value of Rs.100.00 at an auction. Assuming that the maximum yield on the basis of bids received is determined at 12.75 per cent per annum, the bids accepted and payments to be made will be as under

**Illustration I** : The following bids are received

| Nominal amount of bid | Expected yield by bidder (per cent per annum) |
|---|---|
| Rs. 300 crore | 12.00 |
| Rs. 400 crore | 12.25 |
| Rs. 300 crore | 12.75 |
| Rs. 400 crore | 13.00 |

The first three bids will be accepted while the fourth bid will be rejected. The price payable by the respective bidders will be

| | Price | Amount to be Paid |
|---|---|---|
| 1st bidder | Rs.104.30 | Rs.312.90 crore |
| 2nd bidder | Rs.102.84 | Rs.411.36 crore |
| 3rd bidder | Rs.100.00 | Rs.300.00 crore |

**Illustration II :** The following bids are received:

| Nominal amount of bid | Expected yield by bidder (per cent per annum) |
|---|---|
| Rs. 400 crore | 12.20 |
| Rs. 300 crore | 12.30 |
| Rs. 1000 crore | 12.75 |

In this case, the first two bidders will receive ful allotment at the price @ Rs.103.13 and Rs.102.55 and the third bidder will get partial allotment (30 per cent) @ Rs.100.00. The amounts payable by the respective bidders would be Rs.412.52 crore, Rs.307.65 crore and Rs.300.00 crore.

**Note:**

1. All successful bidders will receive half yearly interest @ 12.75 per cent per annum during the tenure of the bonds and the nominal value of the stock at maturity.
2. The yield assumed are purely illustrative and should not be taken as indicative.



## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಮಾರ್ಚ್ ೧೩, ೨೦೦೯ (ಫಾಲ್ಗುಣ ೨೨, ಶಕ ವರ್ಷ ೧೯೩೦) | ನಂ. ೧೫೦ |
|---|---|---|



### ಆರ್ಥಿಕ ಸಚಿವಾಲಯ

### ಅಧಿಸೂಚನೆ – 1

**ಸಂಖ್ಯೆ : ಎಫ್‌ಡಿ 5 ಎಸ್‌ಆರ್‌ಎ 08, ಬೆಂಗಳೂರು, ದಿನಾಂಕ : 9ನೇ ಮಾರ್ಚ್, 2009**

ಕರ್ನಾಟಕ ಸರ್ಕಾರವು ರಚಿಸಲು ಉದ್ದೇಶಿಸಿರುವ ಕರ್ನಾಟಕ ನಾಗರೀಕ ಸೇವಾ (ಸಮೂಹ–ಎ ಅಧಿಕಾರಿಗಳ ಉನ್ನತ ಅಧ್ಯಯನಕ್ಕೆ ಪ್ರತಿನಿಯೋಜನೆ ಮತ್ತು ತರಬೇತಿ ರಜೆ) ನಿಯಮಗಳು, 2008 ರ ಕರಡನ್ನು ಅದರಿಂದ ತೊಂದರೆಗೊಳಗಾಗಬಹುದಾದ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಈ ಕರಡು ಪ್ರಕಟವಾದ ದಿನಾಂಕದಿಂದ ಹದಿನೈದು ದಿಗಳೊಳಗಾಗಿ ಆಕ್ಷೇಪಣೆಗಳು/ಸಲಹೆಗಳನ್ನು ಆಹ್ವಾನಿಸಿ, ದಿನಾಂಕ 24ನೇ ಡಿಸೆಂಬರ್ 2008 ರಂದು ಕರ್ನಾಟಕ ರಾಜ್ಯಪತ್ರದ ಭಾಗ–4ಎ ರಲ್ಲಿ ಅಧಿಸೂಚನೆ ಸಂಖ್ಯೆ:ಎಫ್‌ಡಿ 5 ಎಸ್‌ಆರ್‌ಎ 2008 ರ ದಿನಾಂಕ 22ನೇ ಡಿಸೆಂಬರ್ 2008 ನ್ನು ಕರ್ನಾಟಕ ನಾಗರೀಕ ಸೇವಾ ಅಧಿನಿಯಮ 1978 ರ (1990 ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾಗುವ 3ನೇ ಪ್ರಕರಣದ (2) ನೇ ಉಪ ಪ್ರಕರಣದ ಖಂಡ (ಎ) ದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ:

ಸದರಿ ರಾಜ್ಯಪತ್ರವನ್ನು ದಿನಾಂಕ 24ನೇ ಡಿಸೆಂಬರ್ 2008 ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ ಮತ್ತು ಇದರ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ರೀತಿಯ ಆಕ್ಷೇಪಣೆಗಳು / ಸಲಹೆಗಳು ಬಂದಿರುವುದಿಲ್ಲವಾದ್ದರಿಂದ.

ಈಗ 1978 ರ ಕರ್ನಾಟಕ ನಾಗರೀಕ ಸೇವಾ ಅಧಿನಿಯಮದ (1990 ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪ್ರಕರಣದ (1) ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಗಿನ ನಿಯಮಗಳನ್ನು ಈ ಮೂಲಕ ಮಾಡುತ್ತದೆ, ಎಂದರೆ:–

### ನಿಯಮಗಳು

1. **ಶೀರ್ಷಿಕೆ, ಪ್ರಾರಂಭ ಮತ್ತು ಅನ್ವಯ.–**

(1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ಸಮೂಹ–ಎ ಅಧಿಕಾರಿಗಳ ಉನ್ನತ ಅಧ್ಯಯನಕ್ಕೆ ಪ್ರತಿನಿಯೋಜನೆ ಮತ್ತು ತರಬೇತಿ ರಜೆ) ನಿಯಮಗಳು, 2008 ಎಂದು ಕರೆಯತಕ್ಕದ್ದು.

(2) ಇವು, ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

(3) ಇವು, ರಾಜ್ಯ ಸಿವಿಲ್ ಸೇವೆಯ ಸಮೂಹ 'ಎ' ಅಧಿಕಾರಿಗಳಿಗೆ ಅನ್ವಯಿಸತಕ್ಕದ್ದು.

2. **ಪರಿಭಾಷೆಗಳು.**–ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು:–

(ಎ) 'ಪರಿಶಿಷ್ಟ' ಎಂದರೆ ಈ ನಿಯಮಗಳಿಗೆ ಅನುಬಂಧಿಸಿರುವ ಪರಿಶಿಷ್ಟ;

(ಬಿ) 'ಮಿಷನ್ (ನಿಯೋಗದ) ಮುಖ್ಯಸ್ಥ' ಎಂದರೆ, ರಾಯಭಾರಿ, ಉಪ ರಾಯಭಾರಿ, ಕೌನ್ಸಿಲ್–ಜನರಲ್, ಹೈಕಮೀಷನರ್ ಮತ್ತು ಅಧಿಕಾರಿಯು ಅಧ್ಯಯನ ಕೋರ್ಸ್‌ಗಾಗಿ ಯಾವ ರಾಷ್ಟ್ರದಲ್ಲಿ ಅಧ್ಯಯನ ಮಾಡುತ್ತಿರುವನೋ ಅಥವಾ ತರಬೇತಿ ಪಡೆಯುತ್ತಿರುವನೋ ಆ ರಾಷ್ಟ್ರದಲ್ಲಿ, ಕೇಂದ್ರ ಸರ್ಕಾರ ಹಾಗೆಂದು ಘೋಷಿಸಿರುವ ಅಂಥ ಯಾರೇ ಇತರ ಪ್ರಾಧಿಕಾರಿ.

(ಸಿ) ಈ ನಿಯಮಗಳಲ್ಲಿ ಬಳಸಿರುವ ಆದರೆ ಪರಿಭಾಷಿಸಿಲ್ಲದಿರುವ ಎಲ್ಲಾ ಇತರ ಪದಗಳು ಮತ್ತು ಪದಾವಳಿಗಳು, ಕರ್ನಾಟಕ ಸಿವಿಲ್ ಸೇವಾ ನಿಯಮಗಳು ಅಥವಾ ಸರ್ಕಾರಿ ನೌಕರರ ಸೇವಾ ಷರತ್ತುಗಳನ್ನು ನಿಯಂತ್ರಿಸುವ ಯಾವುವೇ ಇತರ ನಿಯಮಗಳಲ್ಲಿ ಹೇಳಿರುವ ಅರ್ಥವನ್ನೇ ಅನುಕ್ರಮವಾಗಿ ಹೊಂದಿರತಕ್ಕದ್ದು.

3. **ಅಧ್ಯಯನಕ್ಕಾಗಿ ಪ್ರತಿನಿಯೋಜನೆಗೆ ಸಂಬಂಧಿಸಿದ ಷರತ್ತುಗಳು.–**

(1) ಈ ನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳಿಗೊಳಪಟ್ಟು, 'ಎ' ಸಮೂಹದ ಅಧಿಕಾರಿಯನ್ನು ಸಾರ್ವಜನಿಕ ಸೇವೆಯ ಆವಶ್ಯಕತೆಗೆ ಸೂಕ್ತ ಗಮನಕೊಟ್ಟು ಭಾರತದಲ್ಲಿ ಅಥವಾ ಭಾರತದ ಹೊರಗೆ,–

(i) ಆತನ ಕರ್ತವ್ಯ ವಲಯಕ್ಕೆ ನೇರ ಮತ್ತು ನಿಕಟ ಸಂಬಂಧ ಹೊಂದಿರುವ ವೃತ್ತಿಪರ ಅಥವಾ ತಾಂತ್ರಿಕ ವಿಷಯದಲ್ಲಿ ಉನ್ನತ ಅಧ್ಯಯನ ಅಥವಾ ವಿಶೇಷ ತರಬೇತಿಯನ್ನು ಒಳಗೊಂಡ ವಿಶೇಷ ಅಧ್ಯಯನ ಕೋರ್ಸ್‌ಗಾಗಿ; ಅಥವಾ

(ii) ಆತ/ಆಕೆ ನಿಯತವಾದ ಶೈಕ್ಷಣಿಕ ಅಥವಾ ಶೈಕ್ಷಣಿಕ ಸದೃಶ ವ್ಯಾಸಂಗ ಕ್ರಮಕ್ಕೆ ಹಾಜರಾಗದಿದ್ದಾಗ್ಯೂ ಆತನ/ ಆಕೆಯ ಕರ್ತವ್ಯ ವಲಯಕ್ಕೆ ಸಂಬಂಧಿಸಿದಂತೆ ತರಬೇತಿ ಕೋರ್ಸ್ ಅಥವಾ ಅಧ್ಯಯನ ಪ್ರವಾಸವಾಗಿರುವಾಗ ಅಂಥ ತರಬೇತಿ ಕೋರ್ಸ್ ಅಥವಾ ಅಧ್ಯಯನ ಪ್ರವಾಸಕ್ಕಾಗಿ; ಅಥವಾ

(iii) ಸಾರ್ವಜನಿಕ ಆಡಳಿತದ ಚೌಕಟ್ಟು ಅಥವಾ ಹಿನ್ನೆಲೆಗೆ ಸಂಬಂಧಿಸಿದ ಅಧ್ಯಯನಗಳಿಗಾಗಿ; ಅಥವಾ

(iv) ಅಧಿಕಾರಿಯ ಕೆಲಸದೊಂದಿಗೆ ನಿಕಟ ಅಥವಾ ನೇರ ಸಂಬಂಧವಿಲ್ಲದಿರಬಹುದಾದ ಆದರೆ ಒಬ್ಬ ಸಿವಿಲ್ ನೌಕರನಾಗಿ ತನ್ನ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವ ಮತ್ತು ಇತರ ಸಾರ್ವಜನಿಕ ಸೇವಾ ಶಾಖೆಗಳಲ್ಲಿ ನಿಯೋಜಿತರಾಗಿರುವವರೊಂದಿಗೆ ಸಹಕರಿಸಲು ತನ್ನನ್ನು ಉತ್ತಮವಾಗಿ ರೂಪಿಸುವ ರೀತಿಯಲ್ಲಿ ತನ್ನ ಬುದ್ಧಿಶಕ್ತಿಯನ್ನು ವಿಕಾಸಗೊಳಿಸುವಂಥ ಅಧ್ಯಯನಗಳಿಗಾಗಿ ಸಾಧ್ಯವಾಗುವಂತೆ ತರಬೇತಿಗೆ ಹೋಗಲು ಪ್ರತಿನಿಯೋಜಿಸಬಹುದಾಗಿದೆ.

ಪರಂತು (ii) ಮತ್ತು (iii) ನೇ ಖಂಡಗಳ ಮೇರೆಗಿನ ಪ್ರತಿನಿಯೋಜನೆಯು ಈ ಮುಂದಿನ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು, ಎಂದರೆ:–

(ಎ) ನಿರ್ದಿಷ್ಟವಾದ ತರಬೇತಿ, ಅಧ್ಯಯನ ಕೋರ್ಸ್ ಅಥವಾ ಅಧ್ಯಯನ ಪ್ರವಾಸವನ್ನು ಸರ್ಕಾರವು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ (ಆಡಳಿತ ಸುಧಾರಣೆಗಳು) ಇಲಾಖೆ ಗುರುತಿಸಿರತಕ್ಕದ್ದು ಮತ್ತು ಅಧಿಸೂಚಿಸತಕ್ಕದ್ದು; ಮತ್ತು

(ಬಿ) ಅಧಿಕಾರಿಯು ತಾನು ಹಿಂತಿರುಗಿ ಬಂದ ಮೇಲೆ ಅಧ್ಯಯನ ರಜೆ ಮೇಲಿದ್ದಾಗ ತಾನು ಮಾಡಿರುವ ಕೆಲಸದ ಬಗ್ಗೆ ಪೂರ್ಣ ವರದಿಯೊಂದನ್ನು ಸಲ್ಲಿಸಲು ಅಗತ್ಯಪಡಿಸಲಾಗಿದೆ.

(ಸಿ) ಅಧ್ಯಯನ ರಜೆ ಮಂಜೂರು ಮಾಡಲ್ಪಡಬೇಕಾದ ಅಧಿಕಾರಿಗಳ ಸಂಖ್ಯೆಯು, ಆ ವೃಂದಕ್ಕೆ ಮಂಜೂರಾದ ಖಾಯಂ ಸಿಬ್ಬಂದಿ ಸಂಖ್ಯೆಯ ಶೇ. 5ರಷ್ಟನ್ನು ಮೀರದ ಕನಿಷ್ಠ ಸಂಖ್ಯೆಯಾಗಿರತಕ್ಕದ್ದು.

(ಡಿ) ಒಬ್ಬ ಅಧಿಕಾರಿಯನ್ನು ಆತನ ಇಡೀ ಸೇವಾವಧಿಯಲ್ಲಿ ಒಂದು ಸಲ ಮಾತ್ರ ಉನ್ನತ ಅಧ್ಯಯನಗಳಿಗಾಗಿ ಅಥವಾ ತರಬೇತಿಗಾಗಿ ಪ್ರತಿನಿಯೋಜಿಸಬಹುದು.

(ಇ) ಕರ್ನಾಟಕ ಸಿವಿಲ್ ಸೇವಾ ನಿಯಮಗಳ ಅನುಬಂಧ–11ಎ ರ ಉಪಬಂಧಗಳಿಗನುಸಾರ ಪತಿನಿಯೋಜನೆ ಸೌಲಭ್ಯ ಪಡೆದುಕೊಂಡ ಅಧಿಕಾರಿಯು ಈ ನಿಯಮಗಳ ಮೇರೆಗೆ ಪ್ರತಿನಿಯೋಜನೆಯ ಪ್ರಯೋಜನ ಸೌಲಭ್ಯಕ್ಕೆ ಅರ್ಹನಾಗಿರುವುದಿಲ್ಲ.

ಮತ್ತು ಪರಂತು (iv)ನೇ ಖಂಡದ ಮೇರೆಗೆ ಬರುವಂಥ ಪ್ರತಿನಿಯೋಜನೆಯನ್ನು ಸರ್ಕಾರವು ಪ್ರತಿಯೊಂದು ಪ್ರಕರಣದ ಅರ್ಹತೆಗಳ ಮೇಲೆ ಪರಿಗಣಿಸತಕ್ಕದ್ದು.

(2) ಪ್ರತಿನಿಯೋಜನೆಯನ್ನು,–

(i) ಉದ್ದೇಶಿತ ಅಧ್ಯಯನ ಅಥವಾ ತರಬೇತಿಯು ಸಾರ್ವಜನಿಕ ಹಿತಾಸಕ್ತಿಯಿಂದ ಕೂಡಿರತಕ್ಕದ್ದು ಅಥವಾ ನಿಶ್ಚಿತ ಪ್ರಯೋಜನಕ್ಕಾಗಿ ಇರತಕ್ಕದ್ದು ಎಂದು ಸರ್ಕಾರವು ಪ್ರಮಾಣೀಕರಿಸಿದ್ದ ಹೊರತು; ಮತ್ತು

(ii) ಶೈಕ್ಷಣಿಕ ಅಥವಾ ಸಾಹಿತ್ಯಿಕ ವಿಷಯಗಳನ್ನು ಹೊರತುಪಡಿಸಿದ ವಿಷಯಗಳಲ್ಲಿ ಅಧ್ಯಯನಗಳನ್ನು ಮುಂದುವರಿಸುವುದಕ್ಕಾಗಿದ್ದ ಹೊರತು, ಮಾಡತಕ್ಕದ್ದಲ್ಲ

(3) ಭಾರತದ ಹೊರಗೆ,–

(i) ಸರ್ಕಾರದ ಪೂರ್ವಾನುಮೋದನೆಯಿಲ್ಲದೆ ಮತ್ತು

(ii) ಭಾರತದಲ್ಲಿ ಅಥವಾ ಭಾರತ ಸರ್ಕಾರ/ ರಾಜ್ಯ ಸರ್ಕಾರವು ನಿರ್ವಹಿಸುತ್ತಿರುವ ಯಾವುದೇ ಯೋಜನೆಗಳ ಮೇರೆಗೆ ಸಾಕಷ್ಟು ಸೌಲಭ್ಯಗಳಿರುವ ವಿಷಯಗಳಲ್ಲಿ ಅಧ್ಯಯನಗಳ ಮುಂದುವರಿಕೆಗೆ ಪ್ರತಿನಿಯೋಜನೆಯನ್ನು ಮಾಡತಕ್ಕದ್ದಲ್ಲ.

(4) ಅಧಿಕಾರಿಯನ್ನು,–

(i) ಆತನು ಸರ್ಕಾರದಲ್ಲಿ 'ಏಳು ವರ್ಷ'ಗಳಿಗಿಂತ ಕಡಿಮೆ ಸೇವೆ ಸಲ್ಲಿಸಿದ್ದರೆ; ಮತ್ತು

(ii) ಆತ ಮೂವತ್ತು ವರ್ಷಗಳ ಅರ್ಹತಾ ಸೇವೆಯನ್ನು ಪೂರ್ಣಗೊಳಿಸಿದ್ದರೆ ಅಥವಾ ರಜೆ ಮುಕ್ತಾಯವಾದ ತರುವಾಯ ಯಾವ ದಿನಾಂಕದಂದು ಆತ ಕರ್ತವ್ಯಕ್ಕೆ ಹಿಂದಿರುಗಿ ಬರುವನೆಂದು ನಿರೀಕ್ಷಿಸಲಾಗಿದೆಯೋ ಆ ದಿನದಿಂದ ಮೂರು ವರ್ಷಗಳೊಳಗೆ ಐವತ್ತು ವರ್ಷದವನಾಗುತ್ತಿದ್ದರೆ, ಪ್ರತಿನಿಯೋಜಿಸತಕ್ಕದ್ದಲ್ಲ.

(5) ಆತನ ರಜೆಯಿಂದಾಗಿರುವ ಗೈರುಹಾಜರಿಯು, ನಿಯತ ಕಾರ್ಯನಿರ್ವಹಣೆಯ ಕರಾರಿನಿಂದ ತೆಗೆದುಹಾಕುವ ಸಂಭವವಿರುವಾಗ ಅಥವಾ ವೃಂದದಲ್ಲಿ (ಕೇಡರಿನಲ್ಲಿ) ಸಮಸ್ಯೆಗಳು ಉಂಟಾಗುವಂತಿದ್ದರೆ ಪ್ರತಿನಿಯೋಜನೆಯನ್ನು ಮಾಡತಕ್ಕದ್ದಲ್ಲ.

**4. ಪ್ರತಿನಿಯೋಜನೆಯ ಗರಿಷ್ಠ ಅವಧಿ.–** ಪ್ರತಿನಿಯೋಜನೆಯ ಗರಿಷ್ಠ ಅವಧಿಯು, ಕೋರ್ಸ್ ಅಥವಾ ಅಧ್ಯಯನದ ಸಾಮಾನ್ಯ ಅವಧಿಗಿಂತ ಹೆಚ್ಚಾಗಿರತಕ್ಕದ್ದಲ್ಲ.

**5. ಪ್ರತಿನಿಯೋಜನೆಯ ಅವಧಿಯನ್ನು ಇತರ ಬಗೆಯ ರಜೆಯೊಂದಿಗೆ ಸಂಯೋಜಿಸುವುದು.–**

(1) ಅಧ್ಯಯನದ ಪ್ರತಿನಿಯೋಜನೆಯ ಅವಧಿಯನ್ನು ಇತರ ಬಗೆಯ ರಜೆಯೊಂದಿಗೆ ಸಂಯೋಜನೆಗೊಳಿಸಬಹುದು. ಆದರೆ, ಅಸಾಧಾರಣ ರಜೆಯನ್ನು ಹೊರತುಪಡಿಸಿ ಯಾವುದೇ ಸಂದರ್ಭದಲ್ಲಿ ಅಧಿಕಾರಿಯ ನಿಯತ ಕರ್ತವ್ಯಗಳಿಂದ ಸಾಮಾನ್ಯವಾಗಿ ಇಪ್ಪತ್ತೆಂಟು ತಿಂಗಳುಗಳಿಗಿಂತ ಹೆಚ್ಚಿನ ಒಟ್ಟು ಗೈರುಹಾಜರಿಯನ್ನು ಮತ್ತು ಪಿಹೆಚ್‌ಡಿ ಪದವಿ ಕೋರ್ಸ್‌ಗಳಿಗಾಗಿ ಮೂವತ್ತಾರು ತಿಂಗಳುಗಳನ್ನು ಒಳಗೊಂಡ ರಜೆಯೊಂದಿಗೆ ಸಂಯೋಜಿಸಿ ಈ ರಜೆಯನ್ನು ಮಂಜೂರು ಮಾಡತಕ್ಕದ್ದಲ್ಲ.

**ವಿವರಣೆ:–** ಈ ಉಪ–ನಿಯಮದಲ್ಲಿ ನಿರ್ದಿಷ್ಟಪಡಿಸಿದ ಗೈರುಹಾಜರಿಯ ಇಪ್ಪತ್ತೆಂಟು ತಿಂಗಳುಗಳು ಅಥವಾ ಮೂವತ್ತಾರು ತಿಂಗಳುಗಳ ಪರಿಮಿತಿಯು, ರಜಾಕಾಲವನ್ನು (ವೆಕೇಷನ್) ಒಳಗೊಂಡಿರುತ್ತದೆ.

(2) ಯಾವುದೇ ಇತರ ವಿಧದ ರಜೆಯ ಸಂಯೋಜನೆಯೊಂದಿಗೆ ಅಧ್ಯಯನಕ್ಕಾಗಿ ಪ್ರತಿನಿಯೋಜಿಸಿರುವ ಅಧಿಕಾರಿಯು, ತಾನು ಇಚ್ಛಿಸಿದರೆ, ತನ್ನ ಅಧ್ಯಯನವನ್ನು ಇತರ ಬಗೆಯ ರಜೆ ಮುಗಿಯುವುದಕ್ಕಿಂತ ಮೊದಲೇ ಪ್ರಾರಂಭಿಸಬಹುದು. ಆದರೆ, ಅಧ್ಯಯನದ ಕೋರ್ಸಿನೊಂದಿಗೆ ಸೇರಿಕೊಂಡಿರುವ ಅಂಥ ರಜೆಯ ಅವಧಿಯನ್ನು ಅಧ್ಯಯನ ರಜೆಯೆಂದು ಲೆಕ್ಕಹಾಕತಕ್ಕದಲ್ಲ.

**6. ಅಧ್ಯಯನ ಕೋರ್ಸ್‌ನ್ನು ಮೀರಿ ವಿಸ್ತರಿಸುವ ಪ್ರತಿನಿಯೋಜನೆಯ ಅವಧಿಯನ್ನು ನಿಯಂತ್ರಿಸುವುದು.–** ಅಧ್ಯಯನ ಕೋರ್ಸ್‌ಗಾಗಿ, ಅಧ್ಯಯನ ಪ್ರತಿನಿಯೋಜನೆಯ ಅವಧಿಯು ಕೊರತೆಯಾದಾಗ, ಅಧಿಕಾರಿಯು, ಕೊರತೆಯ ಅವಧಿಯನ್ನು ಸಾಮಾನ್ಯ ರಜೆಯೆಂದು ಪರಿಗಣಿಸುವುದಕ್ಕಾಗಿ ಸರ್ಕಾರದ ಪೂರ್ವ ಮಂಜೂರಾತಿಯನ್ನು ಪಡೆದುಕೊಂಡ ಹೊರತು, ಅಧ್ಯಯನ ಕೋರ್ಸ್ ಮುಕ್ತಾಯಗೊಂಡ ನಂತರ ಕರ್ತವ್ಯಕ್ಕೆ ಹಾಜರಾಗತಕ್ಕದ್ದಲ್ಲ.

**7. ಅಧ್ಯಯನ ಮತ್ತು ಇತರ ಭತ್ಯೆಯನ್ನು ಮಂಜೂರು ಮಾಡುವುದು.–**

(1) ಭಾರತದ ಹೊರಗೆ ಅಧ್ಯಯನಕ್ಕೆ ಪ್ರತಿನಿಯೋಜಿಸಿರುವ ಅಧಿಕಾರಿಗೆ, ಮಾನ್ಯತೆ ಪಡೆದ ಸಂಸ್ಥೆಯಲ್ಲಿ ನಿರ್ದಿಷ್ಟ ಅಧ್ಯಯನ ಕೋರ್ಸ್‌ನ್ನು ಮುಂದುವರೆಸಲು ಅಥವಾ ಯಾವುದೇ ನಿರ್ದಿಷ್ಟ ಪ್ರವಾಸಕ್ಕಾಗಿ ಅಥವಾ ಯಾವುದೇ ವಿಶೇಷ ವರ್ಗದ ಕಾಮಗಾರಿಯ ಪರಿವೀಕ್ಷಣೆಗಾಗಿ ಕಳೆದ ಅವಧಿಗಾಗಿ ಮತ್ತು ಅಧ್ಯಯನದ ಕೋರ್ಸ್‌ನ ಕೊನೆಯಲ್ಲಿ ಯಾವುದೇ ಪರೀಕ್ಷಾ ಅವಧಿಯು ಒಳಗೊಂಡ ಅವಧಿಗಾಗಿ, ಅಧ್ಯಯನ ಭತ್ಯೆ ಮಂಜೂರು ಮಾಡತಕ್ಕದ್ದು:

ಪರಂತು, ಅಧ್ಯಯನ ಭತ್ಯೆ ಮಂಜೂರು ಮಾಡಬಹುದಾದ ಅವಧಿಯು ಒಟ್ಟಾರೆ ಇಪ್ಪತ್ತನಾಲ್ಕು ತಿಂಗಳುಗಳನ್ನು ಮೀರತಕ್ಕದ್ದಲ್ಲ.

(2) (ಎ) ಅಧ್ಯಯನ ಭತ್ಯೆಯ ದರಗಳು ಈ ಮುಂದಿನಂತಿರತಕ್ಕದ್ದು, ಎಂದರೆ:–

| **ದೇಶದ ಹೆಸರು** | **ಪ್ರತಿ ದಿನಕ್ಕೆ ಅಧ್ಯಯನ ಭತ್ಯೆ** |
|---|---|
| ಆಸ್ಟ್ರೇಲಿಯಾ | 1.00 (ಪೌಂಡ್ ಸ್ಟರ್ಲಿಂಗ್) |
| ಯುರೋಪ್ ಖಂಡ | 1.65 (ಪೌಂಡ್) |
| ನ್ಯೂಜಿಲ್ಯಾಂಡ್ | 1.20 (ಪೌಂಡ್) |
| ಬ್ರಿಟನ್ | 2.00 (ಪೌಂಡ್) |
| ಅಮೇರಿಕ ಸಂಯುಕ್ತ ಸಂಸ್ಥಾನಗಳು | 2.75 (ಪೌಂಡ್) |

(ಬಿ) ಇತರ ರಾಷ್ಟ್ರಗಳಲ್ಲಿ ಅಧ್ಯಯನ ರಜೆ ಪಡೆದುಕೊಳ್ಳುವ ಅಧಿಕಾರಿಗೆ ಮಂಜೂರು ಮಾಡಬೇಕಾದ ಅಧ್ಯಯನ ಭತ್ಯೆಯ ದರವು, ಕೇಂದ್ರ ಸರ್ಕಾರ ಇಂಥ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸುವ ದರಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಕೇಂದ್ರ ಸರ್ಕಾರ ವಿಶೇಷವಾಗಿ ನಿರ್ಧರಿಸಬಹುದಾದಷ್ಟು ಆಗಿರತಕ್ಕದ್ದು.

(ಸಿ) ಅಧ್ಯಯನ ಭತ್ಯೆ, ಅನುಮತಿಸಲಾಗುವ ಕಡೆ ಮನೆ ಬಾಡಿಗೆ 'ಭತ್ಯೆ', 7ನೇ ನಿಯಮದ (10)ನೇ ಉಪ–ನಿಯಮದ ಮೇರೆಗೆ ವಿಶೇಷವಾಗಿ ಮಂಜೂರು ಮಾಡಲಾಗದ ತುಟ್ಟಿಭತ್ಯೆ ಅಥವಾ ಪಯಾಣಭತ್ಯೆ ಹೊರತುಪಡಿಸಿ ಯಾವುದೇ ವಿಧವಾದ ಭತ್ಯೆ ಪಡೆಯಲು, ಅಧಿಕಾರಿಗೆ ಮಂಜೂರು ಮಾಡಿದ ಅಧ್ಯಯನ ರಜೆಯ ಅವಧಿಯ ಸಂಬಂಧದಲ್ಲಿ ಆತನಿಗೆ ಅನುಮತಿ ಇರತಕ್ಕುದಲ್ಲ.

(3) ಅಧ್ಯಯನ ಭತ್ಯೆಯನ್ನು ಪ್ರತಿತಿಂಗಳ ಕೊನೆಯಲ್ಲಿ, ಅಧಿಕಾರಿಯು ಅಗತ್ಯವಿರುವ ಹಾಜರಾತಿ ಪ್ರಮಾಣಪತ್ರ ಹಾಜರುಪಡಿಸದಿದ್ದುದರಿಂದ ಅಥವಾ ಅನ್ಯಥಾ ಮಾಡಲಾಗಿದ್ದ ಹೆಚ್ಚುವರಿ ಸಂದಾಯವನ್ನು ಸರ್ಕಾರಕ್ಕೆ ಮರು ಪಾವತಿಸುತ್ತೇನೆಂದು ತಾತ್ಕಾಲಿಕವಾಗಿ ಒಂದು ಲಿಖಿತ ಮುಚ್ಚಳಿಕೆ ಬರೆಸಿಕೊಳ್ಳುವುದಕ್ಕೆ ಒಳಪಟ್ಟು ಸಂದಾಯ ಮಾಡಬಹುದು.

(4) ಅಧಿಕಾರಿಯು,

(i) ಆತ ಸರ್ಕಾರದ ನಿರ್ದೇಶನದ ಮೇರೆಗೆ ರಜಾವಧಿಯಲ್ಲಿ ಯಾವುದೇ ವಿಶೇಷ ಅಧ್ಯಯನ ಕೋರ್ಸ್ ಅಥವಾ ಪ್ರಾಯೋಗಿಕ ತರಬೇತಿಗೆ ಹಾಜರಾಗುತ್ತಾನೆಂಬ; ಅಥವಾ

(ii) ಯಾವುದೇ ಅಂಥ ನಿರ್ದೇಶನವಿಲ್ಲದಿರುವಾಗ ಆತ ರಜಾವಧಿಯಲ್ಲಿ ತನ್ನ ಅಧ್ಯಯನ ಮುಂದುವರೆಸಿರುತ್ತಾನೆಂದು ಸಂದರ್ಭಾನುಸಾರ ಸರ್ಕಾರ ಅಥವಾ ನಿಯೋಗದ (ಮಿಷನ್‌ನ) ಮುಖ್ಯಸ್ಥರಿಗೆ ತೃಪ್ತಿಕರವಾದ ಸಾಕ್ಷ್ಯ ಒದಗಿಸುತ್ತಾನೆಂಬ ಷರತ್ತಿಗೊಳಪಟ್ಟು ಅಧ್ಯಯನ ಕೋರ್ಸ್‌ನ ಅವಧಿಯಲ್ಲಿ ಸಮಗ್ರ ರಜಾವಧಿಗೂ ಅಧ್ಯಯನ ಭತ್ಯೆ ಪಡೆದುಕೊಳ್ಳಲು ಅವಕಾಶ ನೀಡಬಹುದು.

(5) ಗರಿಷ್ಠ ಹದಿನಾಲ್ಕು ದಿನಗಳ ಅವಧಿಯ ಹೊರತಾಗಿ ಅಧ್ಯಯನ ಕೋರ್ಸ್‌ನ ಕೊನೆಯಲ್ಲಿ ಬರುವ ರಜಾ ಅವಧಿಗಾಗಿ ಯಾವುದೇ ಅಧ್ಯಯನ ಭತ್ಯೆಯನ್ನು ಪಡೆಯತಕ್ಕದ್ದಲ್ಲ.

**ಸೂಚನೆ:–** ಅಧ್ಯಯನ ಭತ್ಯೆ ಪಡೆಯಲಾದ ರಜಾವಧಿಯನ್ನು, ಅಧ್ಯಯನ ಭತ್ಯೆ ಅನುಮತಿಸುವ ಗರಿಷ್ಠ ಇಪ್ಪತ್ತನಾಲ್ಕು ತಿಂಗಳುಗಳನ್ನು ಲೆಕ್ಕ ಹಾಕುವಲ್ಲಿ ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು.

(6) ಅಧ್ಯಯನ ಭತ್ಯೆಯನ್ನು, ಅಧಿಕಾರಿಯು ಅಧ್ಯಯನ ಕೋರ್ಸ್‌ನ ಅವಧಿಯಲ್ಲಿ ತನ್ನ ಅನುಕೂಲಕ್ಕಾಗಿ, ಅಡ್ಡಿಯುಂಟಾಗುವಂತೆ ಮಾಡಿಕೊಂಡಿರುವ ಯಾವುದೇ ಅವಧಿಗೆ ಮಂಜೂರು ಮಾಡತಕ್ಕದ್ದಲ್ಲ:

ಪರಂತು, ಭಾರತದ ನಿಯೋಗ (ಮಿಷನ್) ಇಲ್ಲದಿರುವಂಥ ರಾಷ್ಟ್ರಕ್ಕೆ ಅಧಿಕಾರಿಯನ್ನು ಪ್ರತಿನಿಯೋಜನೆ ಮಾಡಿರುವ ಸಂದರ್ಭದಲ್ಲಿ ಸರ್ಕಾರವು ಮತ್ತು ಇತರ ಸಂದರ್ಭಗಳಲ್ಲಿ ನಿಯೋಗದ (ಮಿಷನ್‌ನ) ಮುಖ್ಯಸ್ಥರು, ಅಧಿಕಾರಿಯು ಅನಾರೋಗ್ಯದ ಕಾರಣದಿಂದ ಆತನ ಅಧ್ಯಯನ ಕೋರ್ಸ್ ಮುಂದುವರಿಸಲು ಸಾಧ್ಯವಾಗದಿರುವಂಥ ಅವಧಿಯಲ್ಲಿ, ಒಂದು ಸಲಕ್ಕೆ ಹದಿನಾಲ್ಕು ದಿನಗಳನ್ನು ಮೀರದ ಅವಧಿಗಾಗಿ ಅಧ್ಯಯನ ಭತ್ಯೆ ಮಂಜೂರು ಮಾಡುವುದಕ್ಕೆ ಅಧಿಕಾರ ನೀಡಬಹುದು.

(7) ಮಾನ್ಯತೆ ಪಡೆದ ಸಂಸ್ಥೆಯಲ್ಲಿನ ನಿರ್ದಿಷ್ಟ ಅಧ್ಯಯನ ಕೋರ್ಸ್‌ನ ಸಂದರ್ಭದಲ್ಲಿ ಅಧ್ಯಯನ ಭತ್ಯೆಯನ್ನು, ಭಾರತದ ನಿಯೋಗ (ಮಿಷನ್) ಇಲ್ಲದಿರುವಂಥ ರಾಷ್ಟ್ರದಲ್ಲಿ ಅಧ್ಯಯನ ರಜೆ ಪಡೆದಿದ್ದರೆ, ಸರ್ಕಾರವು ಮತ್ತು ಇತರ ಸಂದರ್ಭಗಳಲ್ಲಿ ನಿಯೋಗದ (ಮಿಷನ್‌ನ) ಮುಖ್ಯಸ್ಥ, ಅಧಿಕಾರಿಯು ಸಮರ್ಪಕ ಹಾಜರಾತಿ ಪ್ರಮಾಣಪತ್ರಗಳಿಂದ ಸಮರ್ಥಿಸಿ ಕಾಲಕಾಲಕ್ಕೆ ಸಲ್ಲಿಸುವ ಕ್ಲೇಮುಗಳ ಮೇಲೆ ಸಂದಾಯ ಮಾಡತಕ್ಕದ್ದು.

(8) ಅಧ್ಯಯನ ಭತ್ಯೆಯ ಕ್ಲೇಮುಗಳನ್ನು ಸಮರ್ಥಿಸಿ ಸಲ್ಲಿಸಬೇಕಾಗಿರುವ ಹಾಜರಾತಿ ಪ್ರಮಾಣಪತ್ರವನ್ನು ಅಧಿಕಾರಿಯು ಒಂದು ಶಿಕ್ಷಣ ಸಂಸ್ಥೆಯಲ್ಲಿ ಅಧ್ಯಯನ ನಡೆಸುತ್ತಿದ್ದರೆ ಆ ಅವಧಿಯ ಕೊನೆಯಲ್ಲಿ ಅಥವಾ ಆತ ಯಾವುದೇ ಮತ್ತೊಂದು ಸಂಸ್ಥೆಯಲ್ಲಿ ಅಧ್ಯಯನ ನಡೆಸುತ್ತಿದ್ದರೆ ಮೂರು ತಿಂಗಳುಗಳನ್ನು ಮೀರದ ಮಧ್ಯಂತರ ಅವಧಿಯಲ್ಲಿ ಸಲ್ಲಿಸತಕ್ಕದು.

(9) ಅನುಮೋದಿತ ಅಧ್ಯಯನ ಕಾರ್ಯಕ್ರಮವು ಅಂಥ ಅಧ್ಯಯನ ಕೋರ್ಸ್‌ನ್ನು ಸಂಪೂರ್ಣವಾಗಿ ಒಳಗೊಂಡಿರದಿದ್ದರೆ ಅಥವಾ ಅದರಲ್ಲಿ ಸೇರಿಲ್ಲದಿದ್ದರೆ ಅಧಿಕಾರಿಯು, ಆತನ ಸಮಯವನ್ನು ಹೇಗೆ ಕಳೆಯಲಾಗಿದೆ ಎಂಬುದನ್ನು ತೋರಿಸುವ ಒಂದು ದಿನಚರಿ ಪುಸ್ತಕ ಮತ್ತು ಅಧ್ಯಯನ ಮಾಡಿದ ವಿಧಾನಗಳು ಮತ್ತು ಕಾರ್ಯಾಚರಣೆಗಳ ಸಮಗ್ರ ಸ್ವರೂಪವನ್ನು ತಿಳಿಸುವ ವರದಿ ಹಾಗೂ ಭಾರತದಲ್ಲಿ ಲಭ್ಯವಿರುವ ಪರಿಸ್ಥಿತಿಗಳಿಗೆ ಅಂಥ ವಿಧಾನಗಳು ಅಥವಾ ಕಾರ್ಯಾಚರಣೆಗಳನ್ನು ಅಳವಡಿಸಿಕೊಳ್ಳುವ ಸಾಧ್ಯತೆಗೆ ಸಂಬಂಧಿಸಿದ ಸಲಹೆಗಳೂ ಸೇರಿದಂತೆ ಸಂದರ್ಭಾನುಸಾರ ಸರ್ಕಾರಕ್ಕೆ ಅಥವಾ ನಿಯೋಗದ (ಮಿಷನ್‌ನ) ಮುಖ್ಯಸ್ಥನಿಗೆ ಸಲ್ಲಿಸತಕ್ಕದ್ದು. ದಿನಚರಿ ಮತ್ತು ವರದಿಯು ಅಧಿಕಾರಿಯು ಸಮಯವನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡಿರುವನೇ ಎಂಬುದನ್ನು ತೋರಿಸುತ್ತಿದೆಯೋ ಎಂಬುದನ್ನು ಖಚಿತಪಡಿಸಿಕೊಂಡು ಅದಕ್ಕನುಸಾರವಾಗಿ ಎಷ್ಟು ಅವಧಿಗೆ ಅಧ್ಯಯನ ಭತ್ಯೆ ಮಂಜೂರು ಮಾಡಬೇಕೆಂಬುದನ್ನು ಸರ್ಕಾರವು ನಿರ್ಧರಿಸತಕ್ಕದ್ದು.

(10) ಒಬ್ಬ ಅಧಿಕಾರಿಗೆ ಸಾಮಾನ್ಯವಾಗಿ ಪ್ರಯಾಣ ಭತ್ಯೆ ಸಂದಾಯ ಮಾಡತಕ್ಕದ್ದಲ್ಲ. ಆದರೆ, ಸರ್ಕಾರವು ವಿಶೇಷ ಸಂದರ್ಭಗಳಲ್ಲಿ ಅಂಥ ಭತ್ಯೆ ಮಂಜೂರು ಮಾಡಬಹುದು.

(11) ಅಧ್ಯಯನಕ್ಕಾಗಿ ಪ್ರತಿನಿಯೋಜಿಸಲಾಗಿರುವ ಒಬ್ಬ ಅಧಿಕಾರಿಯು, ತನ್ನ ರಜೆ ಸಂಬಳದೊಂದಿಗೆ ಆತನಿಗೆ ಸರ್ಕಾರವು ಅಥವಾ ಸರ್ಕಾರೇತರ ಸಂಸ್ಥೆಯು ನೀಡಬಹುದಾದಂಥ ಯಾವುದೇ ವಿದ್ಯಾರ್ಥಿವೇತನ ಅಥವಾ ಶಿಷ್ಯ ವೇತನವನ್ನು ಸ್ವೀಕರಿಸುವುದಕ್ಕೆ ಮತ್ತು ಉಳಿಸಿಕೊಳ್ಳುವುದಕ್ಕೆ ಅನುಮತಿಸಬಹುದು. ಅಂಥ ಅಧಿಕಾರಿಗೆ ಸಾಮಾನ್ಯವಾಗಿ ಯಾವುದೇ ಅಧ್ಯಯನ ಭತ್ಯೆಯನ್ನು ಮಂಜೂರು ಮಾಡುವಂತಿಲ್ಲ; ಆದರೆ ವಿಶೇಷ ಪ್ರಕರಣಗಳಲ್ಲಿ ವಿದ್ಯಾರ್ಥಿವೇತನ ಅಥವಾ ಶಿಷ್ಯವೇತನದ ನಿವ್ವಳ ಮೊತ್ತವು (ಅಂದರೆ ಅಧಿಕಾರಿಯು ಸಂದಾಯ ಮಾಡಿರುವ ಶುಲ್ಕಗಳ ವೆಚ್ಚವನ್ನು ಕಳೆದ ನಂತರ ಉಳಿಯುವ ವಿದ್ಯಾರ್ಥಿ ವೇತನ ಅಥವಾ ಶಿಷ್ಯವೇತನದ ಮೌಲ್ಯ) ವಿದ್ಯಾರ್ಥಿ ವೇತನ ಅಥವಾ ಶಿಷ್ಯ ವೇತನ ನೀಡಿರದಿದ್ದರೆ ಬರುತ್ತಿದ್ದ ಅಧ್ಯಯನ ಭತ್ಯೆಗಿಂತ ಕಡಿಮೆಯಿದ್ದರೆ, ನಿವ್ವಳ ವಿದ್ಯಾರ್ಥಿ ವೇತನ ಅಥವಾ ಶಿಷ್ಯ ವೇತನ ಮೌಲ್ಯದ ಮತ್ತು ಸಾಮಾನ್ಯ ಅಧ್ಯಯನ ಭತ್ಯೆಯ ನಡುವಿನ ವ್ಯತ್ಯಾಸವನ್ನು ವಿಶೇಷ ಮಂಜೂರಾತಿ ಮೂಲಕ ಮಂಜೂರು ಮಾಡಬಹುದು.

(12) ಅಧ್ಯಯನಕ್ಕಾಗಿ ಪ್ರತಿನಿಯೋಜಿತನಾಗಿರುವ ಒಬ್ಬ ಅಧಿಕಾರಿಗೆ, ಆತನ ರಜೆ ಸಂಬಳದ ಜೊತೆಗೆ ಅರೆ ಕಾಲಿಕ ಉದ್ಯೋಗದ ಸಂಬಂಧದಲ್ಲಿ ನೀಡುವ ಯಾವುದೇ ಗೌರವ ಸಂಭಾವನೆ ಧನವನ್ನು ಸ್ವೀಕರಿಸುವುದಕ್ಕೆ ಮತ್ತು ಉಳಿಸಿಕೊಳ್ಳುವುದಕ್ಕೆ ಅನುಮತಿ ನೀಡಿದ್ದರೆ, ಆತನಿಗೆ ಸಾಮಾನ್ಯವಾಗಿ ಯಾವುದೇ ಅಧ್ಯಯನ ಭತ್ಯೆ ಮಂಜೂರು ಮಾಡತಕ್ಕದ್ದಲ್ಲ. ಆದರೆ, ಅರೆಕಾಲಿಕ ಉದ್ಯೋಗದ ಸಂಬಂಧದಲ್ಲಿ ಸ್ವೀಕರಿಸುವ ಗೌರವ ಸಂಭಾವನಾ ಧನದ ನಿವ್ವಳ ಮೊತ್ತವು (ಅಂದರೆ ಅಧಿಕಾರಿಯು ಸಂದಾಯ ಮಾಡಿರುವ ಶುಲ್ಕಗಳ ವೆಚ್ಚವನ್ನು ಕಳೆದ ನಂತರ ಬರುವ ಗೌರವ ಸಂಭಾವನಾ ಧನ) ಗೌರವ ಸಂಭಾವನಾ ಧನ ನೀಡಿರದಿದ್ದರೆ ಬರುತ್ತಿದ್ದ ಅಧ್ಯಯನ ಭತ್ಯೆಗಿಂತ ಕಡಿಮೆಯಿರುವಂಥ ವಿಶೇಷ ಪ್ರಕರಣಗಳಲ್ಲಿ, ನಿವ್ವಳ ಗೌರವ ಸಂಭಾವನೆ ಧನ ಮತ್ತು ಸಾಮಾನ್ಯ ಅಧ್ಯಯನ ಭತ್ಯೆ, ಇವುಗಳ ನಡುವಿನ ವ್ಯತ್ಯಾಸವನ್ನು ವಿಶೇಷ ಮಂಜೂರಾತಿ ಮೂಲಕ ಮಂಜೂರು ಮಾಡಬಹುದು.

**8. ಅಧ್ಯಯನದ ಶುಲ್ಕಗಳ ವೆಚ್ಚ.**–ಅಧ್ಯಯನಕ್ಕಾಗಿ ಪ್ರತಿನಿಯೋಜಿತನಾಗಿರುವ ಒಬ್ಬ ಅಧಿಕಾರಿಯು, ಸಾಮಾನ್ಯವಾಗಿ ಅಧ್ಯಯನಕ್ಕಾಗಿ ಸಂದಾಯ ಮಾಡಬೇಕಾಗಿರುವ ಶುಲ್ಕಗಳ ವೆಚ್ಚವನ್ನು ಭರಿಸಲು ಅಗತ್ಯಪಡಿಸಿರತಕ್ಕದ್ದು. ಆದರೆ, ಕೆಲವು ಅಸಾಧಾರಣ ಪ್ರಕರಣಗಳಲ್ಲಿ ಸರ್ಕಾರವು ಅಂಥ ಶುಲ್ಕಗಳಿಗೆ ಅನುದಾನ ಮಂಜೂರು ಮಾಡಬಹುದು:

ಪರಂತು, ಯಾವುದೇ ಪ್ರಕರಣದಲ್ಲಿ ಶುಲ್ಕಗಳ ವೆಚ್ಚವನ್ನು, ವಿದ್ಯಾರ್ಥಿ ವೇತನ ಅಥವಾ ಶಿಷ್ಯ ವೇತನ ಪಡೆಯುತ್ತಿರುವ ಅಥವಾ ಅರೆಕಾಲಿಕ ಉದ್ಯೋಗದ ಸಂಬಂಧದಲ್ಲಿ ಆತನ ರಜೆ ಸಂಬಳದೊಂದಿಗೆ ಯಾವುದೇ ಗೌರವ ಸಂಭಾವನೆ ಪಡೆಯುವುದಕ್ಕೆ ಮತ್ತು ಉಳಿಸಿಕೊಳ್ಳುವುದಕ್ಕೆ ಅನುಮತಿಸಲಾಗಿರುವ ಅಧಿಕಾರಿಗೆ, ಶಿಷ್ಯವೇತನ ಅಥವಾ ವಿದ್ಯಾರ್ಥಿವೇತನ ಅಥವಾ ಅರೆಕಾಲಿಕ ಉದ್ಯೋಗದ ಗೌರವ ಸಂಭಾವನೆಯ ಪ್ರಮಾಣವು ಸಂದಾಯ ಮಾಡಬೇಕಾಗಿರುವ ಶುಲ್ಕಗಳ ಮೊತ್ತಕ್ಕೆ ಸಮನಾಗಿದ್ದರೆ ಅಥವಾ ಹೆಚ್ಚಿನದಾಗಿದ್ದರೆ ಸಂದಾಯ ಮಾಡತಕ್ಕದ್ದಲ್ಲ:

ಮತ್ತೂ ಪರಂತು, ವಿದ್ಯಾರ್ಥಿವೇತನ ಅಥವಾ ಶಿಷ್ಯವೇತನ ಅಥವಾ ಅರೆಕಾಲಿಕ ಉದ್ಯೋಗದ ಸಂಬಂಧದ ಗೌರವ ಸಂಭಾವನೆಯ ಪ್ರಮಾಣವು ಸಂದಾಯ ಮಾಡಬೇಕಾದ ಶುಲ್ಕಗಳಿಗಿಂತ ಕಡಿಮೆಯಿದ್ದ ಸಂದರ್ಭದಲ್ಲಿ ಅಧಿಕಾರಿಗೆ, ಅಂಥ ವಿದ್ಯಾರ್ಥಿವೇತನ ಅಥವಾ ಶಿಷ್ಯವೇತನ ಅಥವಾ ಅರೆಕಾಲಿಕ ಉದ್ಯೋಗದ ಸಂಬಂಧದಲ್ಲಿನ ಗೌರವ ಸಂಭಾವನೆಯ ಮತ್ತು ಶುಲ್ಕಗಳ ಪ್ರಮಾಣದ ವ್ಯತ್ಯಾಸಕ್ಕೆ ಸಮನಾದಷ್ಟು ಮೊತ್ತವನ್ನು ಮಂಜೂರು ಮಾಡಬಹುದು.

**9. ಅಧ್ಯಯನಕ್ಕೆ ಪ್ರತಿನಿಯೋಜಿಸಿದ ತರುವಾಯ ಅಥವಾ ಅಧ್ಯಯನ ಕೋರ್ಸ್‌ನ್ನು ಪೂರ್ಣಗೊಳಿಸದೆ ರಾಜೀನಾಮೆ ನೀಡುವುದು ಅಥವಾ ನಿವೃತ್ತರಾಗುವುದು.–**

(1) ಅಧ್ಯಯನ ಅಥವಾ ಅಂಥ ರಜೆಯ ವಿಸ್ತರಿಸಿ ಪ್ರತಿನಿಯೋಜಿಸಲಾಗಿರುವ ಅಧಿಕಾರಿಯು, ಅಂಥ ಅಧ್ಯಯನ ಅಥವಾ ಆತನಿಗೆ ಮಂಜೂರು ಮಾಡಿರುವ ಅಂಥ ರಜೆಯ ವಿಸ್ತರಣೆ ಪ್ರಾರಂಭವಾಗುವುದಕ್ಕಿಂತ ಮುಂಚಿತವಾಗಿ ಸಂದರ್ಭಾನುಸಾರ ಅನುಬಂಧ–ಎ ಅಥವಾ ಅನುಬಂಧ– ಎ1 ರಲ್ಲಿ ಕೊಟ್ಟಿರುವ ಒಂದು ಬಂಧಪತ್ರ (ಮುಚ್ಚಳಿಕೆ) ಬರೆದುಕೊಡಲು ಅಗತ್ಯಪಡಿಸತಕ್ಕದು.

(2) ಅಧಿಕಾರಿಯು, ಅಧ್ಯಯನ ಅವಧಿ ಮುಗಿದ ತರುವಾಯ ಕರ್ತವ್ಯಕ್ಕೆ ಹಾಜರಾಗದೆ ಅಥವಾ ಕರ್ತವ್ಯಕ್ಕೆ ಹಾಗೆ ಹಿಂದಿರುಗಿ ಬಂದ ತರುವಾಯ ಮೂರು ವರ್ಷಗಳ ಅವಧಿಯೊಳಗೆ ರಾಜೀನಾಮೆ ನೀಡಿದರೆ ಅಥವಾ ಸೇವೆಯಿಂದ ನಿವೃತ್ತನಾದರೆ ಅಥವಾ ಅಧ್ಯಯನ ಕೋರ್ಸ್‌ನ್ನು ಪೂರ್ಣಗೊಳಿಸಲು ವಿಫಲನಾದರೆ ಮತ್ತು ಅನುಬಂಧ 'ಬಿ' ಯಲ್ಲಿ ಹೇಳಿರುವ ಪ್ರಮಾಣ ಪತ್ರ ಒದಗಿಸಲು ವಿಫಲನಾದರೆ,–

ಆತನು,

(i) ರಜೆ ಸಂಬಳ, ಅಧ್ಯಯನ ಭತ್ಯೆ, ಶುಲ್ಕಗಳ ವೆಚ್ಚ, ಪ್ರಯಾಣ ಭತ್ಯೆ ಮತ್ತು ಇತರ ವೆಚ್ಚಗಳನ್ನೇನಾದರೂ ಆತ ಅಧ್ಯಯನ ರಜೆ ಅವಧಿಯಲ್ಲಿ ಪಡೆದಿದ್ದರೆ, ಅವುಗಳ ವಾಸ್ತವಿಕ ಮೊತ್ತ; ಮತ್ತು

(ii) ವಿದೇಶಿ ಸರ್ಕಾರ, ಪ್ರತಿಷ್ಠಾನಗಳು ಅಥವಾ ನ್ಯಾಸಗಳಂಥ ಇತರ ಏಜೆನ್ಸಿಗಳು ಅಧ್ಯಯನ ಕೋರ್ಸ್‌ನ ಸಂಬಂಧದಲ್ಲಿ ಯಾವುದಾದರೂ ವೆಚ್ಚ ಮಾಡಿದ್ದಲ್ಲಿ ಅದರ ವಾಸ್ತವಿಕ ಮೊತ್ತವನ್ನು,

–ಆತನ ರಾಜಿನಾಮೆ ಅಂಗೀಕರಿಸುವ ಅಥವಾ ನಿವೃತ್ತಿಗೆ ಅನುಮತಿ ನೀಡುವ ದಿನಾಂಕದ ಮೊದಲು, ತಗಾದೆ ಮಾಡಿದ್ದ ದಿನಾಂಕದಿಂದ ಸರ್ಕಾರಿ ಸಾಲಗಳ ಮೇಲೆ ತತ್ಕಾಲದಲ್ಲಿ ಜಾರಿಯಲ್ಲಿರುವ ಸರ್ಕಾರಿ ದರಗಳಲ್ಲಿ ಬಡ್ಡಿಯ ಸಹಿತ ಮರು ಸಂದಾಯ ಮಾಡಲು ಅಗತ್ಯಪಡಿಸತಕ್ಕದ್ದು:

ಪರಂತು, ಅಧ್ಯಯನ ಕೋರ್ಸ್‌ನ್ನು ಪೂರ್ಣಗೊಳಿಸಲು ವಿಫಲನಾದ ಅಧಿಕಾರಿಯ ಪ್ರಕರಣದಲ್ಲಿ ಈ ನಿಯಮದಲ್ಲಿರುವ ಯಾವುದೂ,–

(ಎ) ಅಧ್ಯಯನದಿಂದ ಕರ್ತವ್ಯಕ್ಕೆ ಹಿಂದಿರುಗಿ ಬಂದ ಅಧಿಕಾರಿಯು, ವೈದ್ಯಕೀಯ ಕಾರಣಗಳ ಮೇಲೆ ಸೇವೆಯಿಂದ ನಿವೃತ್ತನಾಗುವುದಕ್ಕೆ ಅನುಮತಿಸಲಾಗಿರುವ ಅಧಿಕಾರಿಗೆ; ಮತ್ತು

(ಬಿ) ಅಧ್ಯಯನದಿಂದ ಕರ್ತವ್ಯಕ್ಕೆ ಹಿಂದಿರುಗಿ ಬಂದ ಅಧಿಕಾರಿಗೆ ಯಾವುದೇ ಶಾಸನಬದ್ಧ ಅಥವಾ ಸ್ವಾಯತ್ತ ಸಂಸ್ಥೆ ಅಥವಾ ಸರ್ಕಾರದ ನಿಯಂತ್ರಣದಲ್ಲಿರುವ ಸಂಸ್ಥೆಯಲ್ಲಿ ಸೇವೆ ಸಲ್ಲಿಸುವುದಕ್ಕಾಗಿ ಪ್ರತಿನಿಯೋಜಿಸಲಾಗಿರುವ ಮತ್ತು ತರುವಾಯ ಸಾರ್ವಜನಿಕ ಹಿತಾಸಕ್ತಿಯಲ್ಲಿ ಸದರಿ ಶಾಸನಬದ್ಧ ಸಂಸ್ಥೆ ಅಥವ ಸ್ವಾಯತ್ತ ಸಂಸ್ಥೆ ಅಥವಾ ಸಂಸ್ಥೆಯಲ್ಲಿ ಆತನು ಖಾಯಂ ಆಗಿ ವಿಲೀನಗೊಳ್ಳುವ ದೃಷ್ಟಿಯಿಂದ ಸರ್ಕಾರದ ಅಧೀನದಲ್ಲಿರುವ ಸೇವೆಯಿಂದ ನಿವೃತ್ತನಾಗುವುದಕ್ಕೆ ತರುವಾಯ ಅನುಮತಿ ನೀಡಲಾಗಿರುವ ಒಬ್ಬ ಅಧಿಕಾರಿಗೆ, ಅನ್ವಯಿಸತಕ್ಕದ್ದಲ್ಲ.

(3) ಅಂಥ ಅಧಿಕಾರಿಗೆ ಲಭ್ಯವಾದ ಅಧ್ಯಯನ ರಜೆಯನ್ನು, ಅಧ್ಯಯನ ರಜೆ ಪ್ರಾರಂಭವಾದ ದಿನಾಂಕದಂದು ಆತನ ರಜೆ ಲೆಕ್ಕದಲ್ಲಿರುವ ನಿಯತ ರಜೆಗೆ ಪರಿವರ್ತಿಸತಕ್ಕದ್ದು, ಅಧ್ಯಯನ ರಜೆಯ ಮುಂದುವರಿಕೆಯಾಗಿ ಯಾವುದೇ ನಿಯತ ರಜೆಯನ್ನು ತೆಗೆದುಕೊಂಡರೆ, ಅದನ್ನು ಆ ಉದ್ದೇಶಕ್ಕಾಗಿ ಸೂಕ್ತವಾಗಿ ಹೊಂದಾಣಿಕೆ ಮಾಡತಕ್ಕದ್ದು ಮತ್ತು ಹಾಗೆ ಪರಿವರ್ತಿಸಲಾಗದೆ ಬಾಕಿ ಉಳಿದ ಅಧ್ಯಯನ ರಜೆಯನ್ನು ಯಾವುದಾದರೂ ಇದ್ದರೆ, ಅದನ್ನು ಅಸಾಧಾರಣ ರಜೆಯೆಂದು ಪರಿಗಣಿಸತಕ್ಕದ್ದು. (2)ನೇ ಉಪನಿಯಮದ ಮೇರೆಗೆ ಅಧಿಕಾರಿಯು ಮರುಪಾವತಿಸಬೇಕಾಗಿರುವ ಮೊತ್ತದ ಜೊತೆಗೆ ಮೇಲೆ ಹೇಳಿದ ಅಧ್ಯಯನ ರಜೆಯನ್ನು ಪರಿವರ್ತಿಸಿದ ಮೇಲೆ ಅನುಮತಿಸಿರುವ ರಜೆ ಸಂಬಳವನ್ನು ಮೀರಿ, ಆತನು ವಾಸ್ತವವಾಗಿ ಪಡೆದುಕೊಂಡಿದ್ದ ಯಾವುದೇ ಹೆಚ್ಚಿನ ರಜೆ ಸಂಬಳವನ್ನು ಮರುಪಾವತಿ ಮಾಡಲು ಅಗತ್ಯಪಡಿಸತಕ್ಕದ್ದು.

(4) ಹಿಂದಿನ ಉಪನಿಯಮಗಳಲ್ಲಿ ಏನೇ ಒಳಗೊಂಡಿದ್ದಾಗ್ಯೂ ಸರ್ಕಾರವು, ಸಾರ್ವಜನಿಕ ಹಿತಾಸಕ್ತಿಯಲ್ಲಿ ಅಥವಾ ಪ್ರಕರಣದ ಅಥವಾ ಪ್ರಕರಣಗಳ ವರ್ಗದ ವಿಶಿಷ್ಟ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು, ಸಂಬಂಧಪಟ್ಟ ಅಧಿಕಾರಿಯು (2)ನೇ ಉಪನಿಯಮದ ಮೇರೆಗೆ ಮರುಪಾವತಿಸಬೇಕಾಗಿರುವ ಮೊತ್ತವನ್ನು ಮನ್ನಾ ಮಾಡುವುದು ಅಥವಾ ಕಡಿಮೆ ಮಾಡುವುದು ಅವಶ್ಯಕವಾಗಿದ್ದರೆ ಅಥವಾ ವಿಹಿತವಾಗಿದ್ದರೆ ಆದೇಶದ ಮೂಲಕ ಹಾಗೆ ಮಾಡಬಹುದು.

**10. ಅಧ್ಯಯನ ಪ್ರತಿನಿಯೋಜನೆ ಅವಧಿಯ ಸಮಯದಲ್ಲಿ ರಜೆ ಸಂಬಳ.–**

(1) ಭಾರತದ ಹೊರಗೆ ದೊರೆತಿರುವ ಅಧ್ಯಯನ ಪ್ರತಿನಿಯೋಜನೆ ಅವಧಿಯ ಸಮಯದಲ್ಲಿ ಒಬ್ಬ ಅಧಿಕಾರಿಯು, ಹಾಗೆ ಅಂಥ ರಜೆ ಮೇಲೆ ತೆರಳುವುದಕ್ಕಿಂತ ನಿಕಟಪೂರ್ವದಲ್ಲಿ ಆತ ಪಡೆಯುತ್ತಿದ್ದ ವೇತನದ ಮೊತ್ತಕ್ಕೆ ಸಮನಾದ ರಜೆ ಸಂಬಳ ಮತ್ತು ಇದರೊಂದಿಗೆ ತುಟ್ಟಿಭತ್ಯೆ ಹಾಗೂ ಮನೆ ಬಾಡಿಗೆ ಭತ್ಯೆ ಮತ್ತು 7ನೇ ನಿಯಮದ ಮೇರೆಗೆ ಅನುಮತಿಸಲಾದ ಅಧ್ಯಯನ ಭತ್ಯೆ ಪಡೆಯತಕ್ಕದ್ದು.

(2) (ಎ) ಭಾರತದಲ್ಲಿ ಉಪಯೋಗಿಸಿಕೊಂಡ ಅಧ್ಯಯನ ಪ್ರತಿನಿಯೋಜನೆಯ ಸಮಯದಲ್ಲಿ ಒಬ್ಬ ಅಧಿಕಾರಿಯು, ಹಾಗೆ ಅಂಥ ರಜೆ ಮೇಲೆ ತೆರಳುವುದಕ್ಕಿಂತ ನಿಕಟಪೂರ್ವದಲ್ಲಿ ಆತನು ಪಡೆಯುತ್ತಿದ್ದ ವೇತನದ, ಮೊತ್ತಕ್ಕೆ ಸಮನಾದ ರಜೆ ಸಂಬಳ ಮತ್ತು ಇದರೊಂದಿಗೆ ತುಟ್ಟಿಭತ್ಯೆ ಹಾಗೂ ಮನೆ ಬಾಡಿಗೆ ಭತ್ಯ ಪಡೆಯತಕ್ಕದ್ದು.

(ಬಿ) ಖಂಡದ ಮೇರೆಗೆ ಪೂರ್ಣಪ್ರಮಾಣದಲ್ಲಿ ರಜೆ ಸಂಬಳ ಸಂದಾಯ ಮಾಡಬಹುದು, ಅಧಿಕಾರಿಯು ಯಾವುದೇ ವಿದ್ಯಾರ್ಥಿ ವೇತನ ಅಥವಾ ಶಿಷ್ಯವೇತನ ಅಥವಾ ಅರೆಕಾಲಿಕ ಉದ್ಯೋಗದ ಸಂಬಂಧದಲ್ಲಿ ಗೌರವ ಸಂಭಾವನೆ ಪಡೆಯುತ್ತಿಲ್ಲವೆಂಬುದನ್ನು ತಿಳಿಸುವಂಥ ಪ್ರಮಾಣಪತ್ರ ಒದಗಿಸುವುದಕ್ಕೆ ಒಳಪಟ್ಟಿರತಕ್ಕದ್ದು.

(ಸಿ) 7ನೇ ನಿಯಮದ (11)ಮತ್ತು(12)ನೇ ಉಪನಿಯಮಗಳಲ್ಲಿ ತಿಳಿಸಿರುವಂತೆ ಒಬ್ಬ ಅಧಿಕಾರಿಯು, ಅಧ್ಯಯನ ರಜೆ ಅವಧಿಯಲ್ಲಿ ಸ್ವೀಕರಿಸಿದ ವಿದ್ಯಾರ್ಥಿವೇತನ ಅಥವಾ ಶಿಷ್ಯವೇತನ ಅಥವಾ ಅರೆಕಾಲಿಕ ಉದ್ಯೋಗದ ಸಂಬಂಧದಲ್ಲಿ ಗೌರವ ಸಂಭಾವನೆಯ ಮೊತ್ತವು, ಯಾವುದಾದರೂ ಇದ್ದರೆ, ಅದನ್ನು, ಅರ್ಧವೇತನ ರಜೆ ಅವಧಿಯಲ್ಲಿ, ರಜಾ ಸಂಬಳವಾಗಿ ಸಂದಾಯ ಮಾಡುವ ಮೊತ್ತಕ್ಕಿಂತ ಕಡಿಮೆ ಮೊತ್ತಕ್ಕೆ ಇಳಿಸತಕ್ಕದ್ದಲ್ಲವೆಂಬ ಷರತ್ತಿಗೆ ಒಳಪಟ್ಟು, ಈ ಉಪನಿಯಮದ ಮೇರೆಗೆ ಸಂದಾಯ ಮಾಡಬೇಕಾದ ರಜಾ ಸಂಬಂಳದ ಸಂಬಂಧದಲ್ಲಿ ಹೊಂದಾಣಿಕೆ ಮಾಡತಕ್ಕದ್ದು.

(ಡಿ) ಭಾರತದಲ್ಲಿ ಅಧ್ಯಯನ ಮಾಡುವಂಥ ಅಧ್ಯಯನ ಕೋರ್ಸ್‌ನ್ನು ಅಧ್ಯಯನ ಮಾಡುವುದಕ್ಕಾಗಿ, ಅಧ್ಯಯನ ಪ್ರತಿನಿಯೋಜನೆಯ ಅವಧಿಗೆ ಅಧ್ಯಯನ ಭತ್ಯೆ ಸಂದಾಯ ಮಾಡತಕ್ಕದ್ದಲ್ಲ.

(ಇ) ಈ ನಿಯಮಗಳಲ್ಲಿ ಏನೇ ಇದ್ದರೂ, ಭಾರತ ಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಕಾಲಕಾಲಕ್ಕೆ ಅನುಮೋದಿಸುವ ಫೆಲೋಷಿಪ್‌ನ ಸಂಬಂಧದಲ್ಲಿ ಪ್ರತಿನಿಯೋಜನೆ ಸೌಲಭ್ಯ ಪಡೆದಿರುವಂಥ ಒಬ್ಬ ಅಧಿಕಾರಿಯು, ಫೆಲೋಶಿಪ್‌ನ ಪೂರ್ಣ ಮೌಲ್ಯ ಮತ್ತು ಯಾವುದೇ ಫೆಲೋಶಿಪ್ ಪಡೆಯದಿದ್ದರೆ ಪಡೆಯಬಹುದಾಗಿದ್ದಂಥ ಪೂರ್ಣವೇತನ ಹಾಗೂ ತುಟ್ಟಿಭತ್ಯೆ ಮತ್ತು ಮನೆ ಬಾಡಿಗೆ ಭತ್ಯೆಯನ್ನು ಪಡೆಯುವುದಕ್ಕೆ ಅರ್ಹನಾಗಿರತಕ್ಕದ್ದು.

**11. ಮುಂಬಡ್ತಿ, ನಿವೃತ್ತಿ ವೇತನ, ಜೇಷ್ಠತೆ, ರಜೆ ಮತ್ತು ವೇತನ ಬಡ್ತಿಗಾಗಿ ಅಧ್ಯಯನ ಪ್ರತಿನಿಯೋಜನೆಯ ಅವಧಿಯನ್ನು ಲೆಕ್ಕ ಹಾಕುವುದು.–**ಅಧ್ಯಯನ ಪ್ರತಿನಿಯೋಜನೆಯ ಅವಧಿಯು, ಮುಂಬಡ್ತಿ, ನಿವೃತ್ತಿ ವೇತನ, ಜೇಷ್ಠತೆ ಮತ್ತು ವೇತನ ಬಡ್ತಿಗಳಿಗೆ ಗಣನೆಗೆ ತೆಗೆದುಕೊಳ್ಳತಕ್ಕದ್ದು.

ಪರಂತು, ಅಧ್ಯಯನ ರಜೆಗೆ ತೆರಳುವ ಸಮಯದಲ್ಲಿ ಒಬ್ಬ ಅಧಿಕಾರಿಯನ್ನು ಉನ್ನತ ಹುದ್ದೆಯಲ್ಲಿ ಸ್ಥಾನಪನ್ನಾನಾಗಿದ್ದರೆ, ಅಧ್ಯಯನ ರಜೆಯನ್ನು, ಸರ್ಕಾರವು ಕಾಲಕಾಲಕ್ಕೆ ಸೂಚಿಸುವಷ್ಟರ ಮಟ್ಟಿಗೆ ವೇತನಬಡ್ತಿಗಳಿಗೆ ಗಣನೆಗೆ ಬರತಕ್ಕದ್ದು.

**12. ಅಧ್ಯಯನ ಪ್ರತಿನಿಯೋಜನೆಗೆ ಅರ್ಜಿ ಸಲ್ಲಿಸುವುದಕ್ಕೆ ಮತ್ತು ಅಂಥ ರಜೆ ಮಂಜೂರು ಮಾಡುವುದಕ್ಕೆ ಸಂಬಂಧಿಸಿದ ಪ್ರಕ್ರಿಯೆ.**–ಅಧ್ಯಯನ ಪ್ರತಿನಿಯೋಜನೆಗೆ ಅರ್ಜಿ ಸಲ್ಲಿಸುವುದಕ್ಕೆ ಮತ್ತು ಅಂಥ ಸೌಲಭ್ಯವನ್ನು ಮಂಜೂರು ಮಾಡುವುದಕ್ಕೆ ಅನುಸರಿಸಬೇಕಾದ ಪ್ರಕ್ರಿಯೆಯು ಅನುಬಂಧ–ಬಿ ಯಲ್ಲಿ ನೀಡಿರುವ ಪ್ರಕ್ರಿಯಾ ಸೂಚನೆಗಳಲ್ಲಿ ಹೇಳಿರುವಂತೆ ಇರತಕ್ಕದ್ದು.

**ಪರಿಶಿಷ್ಟ 'ಎ'**

**[ನಿಯಮ 9(i) ನೋಡಿ]**

**ಅಧ್ಯಯನ ರಜೆಯ ಮೇಲೆ ತೆರಳುತ್ತಿರುವ ಅಧಿಕಾರಿಯು ಬರೆದುಕೊಡಬೇಕಾದ ಬಂಧಪತ್ರ**

ಈ ಲಿಖಿತದ ಮೂಲಕ ಎಲ್ಲರಿಗೂ ತಿಳಿಸುವುದೇನೆಂದರೆ, ಕರ್ನಾಟಕ ಸರ್ಕಾರದಲ್ಲಿ ಈಗ __________ ಎಂದು ನಿಯೋಜಿತನಾಗಿರುವ ------------------------------- ಜಿಲ್ಲೆಯಲ್ಲಿ --------------- ನಿವಾಸಿಯಾಗಿರುವ ----------------- ಆದ ನಾನು, ರಾಜ್ಯಪಾಲರಿಗೆ (ಇದರಲ್ಲಿ ಇನ್ನು ಮುಂದೆ 'ಸರ್ಕಾರ' ಎಂದು ಉಲ್ಲೇಖಿಸಿದೆ) ______________ ರೂ. ಗಳ [--------------- ರೂಪಾಯಿಗಳು] ಹಣವನ್ನು ಅದರ ಮೇಲಿನ ಬಡ್ಡಿ ಸಮೇತ ಕೇಳಿದ ಕೂಡಲೇ ಮತ್ತು ವಿಳಂಬವಿಲ್ಲದೆ, ಆ ದಿನಾಂಕದಿಂದ ಸರ್ಕಾರಿ ಸಾಲಗಳ ಮೇಲೆ ತತ್ಕಾಲದಲ್ಲಿ ಜಾರಿಯಲ್ಲಿರುವ ಸರ್ಕಾರಿ ದರಗಳಲ್ಲಿ ಅಥವಾ ಭಾರತ ಹೊರತು ಬೇರೆ ದೇಶದಲ್ಲಿ ಪಾವತಿ ಮಾಡಿದರೆ, ಆ ದೇಶ ಮತ್ತು ಭಾರತದ ನಡುವಿನ ಅಧಿಕೃತ ವಿನಿಮಯ ದರದಲ್ಲಿ ಪರಿವರ್ತಿಸಿದ ಆ ದೇಶದ ಕರೆನ್ಸಿಯಲ್ಲಿ ಸದರಿ ಮೊತ್ತಕ್ಕೆ ಸಮನಾದ ಮೊತ್ತವನ್ನು ನ್ಯಾಯವಾದಿ (ಅಟಾರ್ನಿ) ಮತ್ತು ಕಕ್ಷಿದಾರನ ನಡುವಿನ ಎಲ್ಲಾ ವೆಚ್ಚಗಳು ಹಾಗೂ ಸರ್ಕಾರವು ವಹಿಸಿಕೊಂಡಿರತಕ್ಕ ಹಾಗೂ ವಹಿಸಿಕೊಳ್ಳಬಹುದಾದಂಥ ಎಲ್ಲಾ ಚಾರ್ಜುಗಳು ಮತ್ತು ಖರ್ಚುಗಳ ಸಮೇತ ಸಂದಾಯ ಮಾಡಲು ನಾನು ಮತ್ತು ನನ್ನ ಉತ್ತರಾಧಿಕಾರಿಗಳು, ನಿರ್ವಾಹಕರು ಮತ್ತು ಆಡಳಿತಗಾರರು ಈ ಮೂಲಕ ಬದ್ಧರಾಗಿದ್ದೇವೆ.

ಈ ದಿನ ಎರಡು ಸಾವಿರದ --------------- ತಿಂಗಳಿನ --------------------ದಿನಾಂಕದಂದು,

ಮೇಲೆ ಹೇಳಿದಂತೆ ಬದ್ಧನಾಗಿರುವ ---------------ಇವರಿಗೆ ಸರ್ಕಾರವು ಅಧ್ಯಯನದ ರಜೆಯನ್ನು ಮಂಜೂರು ಮಾಡಿರುವುದರಿಂದ;

ಮತ್ತು, ಮೇಲೆ ಹೇಳಿದಂತೆ ಬದ್ಧರಾಗಿರುವವರು ಸರ್ಕಾರದ ಹಿತಾಸಕ್ತಿಯನ್ನು ಕಾಪಾಡುವುದಕ್ಕಾಗಿ ಈ ಕೆಳಗಿನ ಲಿಖಿತ ಷರತ್ತುಗಳಂತೆ ಈ ಬಂಧಪತ್ರವನ್ನು ಬರೆದುಕೊಡಲು ಒಪ್ಪಿರುವುದರಿಂದ,

ಈಗ, ಮೇಲಿನ ಲಿಖಿತ ಬಾಧ್ಯತೆಯ ಷರತ್ತೇನೆಂದರೆ, ಮೇಲೆ ಹೇಳಿದಂತೆ ಬದ್ಧನಾದ -------- ಇವರು ರಾಜೀನಾಮೆ ನೀಡಿದ ಅಥವಾ ಸೇವೆಯಿಂದ ನಿವೃತ್ತಿ ಹೊಂದಿದ ಸಂದರ್ಭದಲ್ಲಿ,

ಹಾಗೆ ವಿಸ್ತರಿಸಿದ ಅಧ್ಯಯನ ರಜೆಯ ಅವಧಿಯು ಮುಕ್ತಾಯವಾದ ಅಥವಾ ಕೊನೆಗೊಂಡ ನಂತರ ಕರ್ತವ್ಯಕ್ಕೆ ಆತನು ಹಿಂತಿರುಗಿದ ನಂತರ ಮೂರು ವರ್ಷಗಳ ಅವಧಿಯ ಒಳಗೆ ಯಾವುದೇ ಸಮಯದಲ್ಲಿ, ಸರ್ಕಾರಿ ಸಾಲಗಳ ಮೇಲೆ ತತ್ಕಾಲದಲ್ಲಿ ಜಾರಿಯಲ್ಲಿರುವ ಸರ್ಕಾರಿ ದರಗಳಲ್ಲಿ ಹಣ ಕೇಳಿದ ದಿನಾಂಕದಿಂದ ಅದರ ಮೇಲಿನ ಬಡ್ಡಿ ಸಮೇತ ------------- ರೂ. ಗಳ (------------------ ರೂಪಾಯಿಗಳು) ಸದರಿ ಹಣವನ್ನು ಆತನು ಸರ್ಕಾರಕ್ಕೆ ತಕ್ಷಣವೇ ಅಥವಾ ಕೇಳಿದ ಕೂಡಲೇ ಸರ್ಕಾರವು ನಿರ್ದೇಶಿಸಬಹುದಾದಂತೆ ಸಂದಾಯ ಮಾಡತಕ್ಕದ್ದು.

ಮತ್ತು ಮೇಲೆ ಹೇಳಿದಂತೆ ಬದ್ಧನಾದ ------------- ಇವರು ಅಂಥ ಸಂದಾಯವನ್ನು ಮಾಡಿದ ನಂತರ ಮೇಲಿನ ಲಿಖಿತ ಬಾಧ್ಯತೆಯು ರದ್ದಾಗತಕ್ಕದ್ದು ಮತ್ತು ನಿಷ್ಪರಿಣಾಮಕಾರಿಯಾಗಿರತಕ್ಕದ್ದು. ಅನ್ಯಥಾ ಅದು ಪೂರ್ಣ ಜಾರಿಯಲ್ಲಿರತಕ್ಕದ್ದು ಮತ್ತು ಬಲದಿಂದ ಕೂಡಿರತಕ್ಕದ್ದು.

ಈ ಬಂಧಪತ್ರದ ಮೇಲೆ ಸಂದಾಯ ಮಾಡಲಾಗುವ ಸ್ಟ್ಯಾಂಪು ಸುಂಕವನ್ನು ಸರ್ಕಾರವೇ ಭರಿಸತಕ್ಕದ್ದು ಮತ್ತು ಸಂದಾಯ ಮಾಡತಕ್ಕದ್ದು.

----------- ಇವರ ಸಮಕ್ಷಮದಲ್ಲಿ ಮೇಲೆ ಹೇಳಿದಂತೆ ಬದ್ಧನಾದ --------- ಇವರು ಸಹಿ ಮಾಡಿ ಒಪ್ಪಿಸಿಕೊಟ್ಟಿದ್ದಾರೆ.

**ರಾಜ್ಯಪಾಲರಿಗಾಗಿ ಮತ್ತು ಅವರ**

**ಪರವಾಗಿ ಅಂಗೀಕರಿಸಲಾಗಿದೆ**

**ಪರಿಶಿಷ್ಟ–ಎI**
**[ನಿಯಮ 9(i) ನ್ನು ನೋಡಿ]**

**ಅಧ್ಯಯನ ರಜೆಯನ್ನು ವಿಸ್ತರಿಸಲಾಗಿರುವ ಅಧಿಕಾರಿಯು ಬರೆದುಕೊಡಬೇಕಾದ ಬಂಧಪತ್ರ**

ಈ ಲಿಖಿತದ ಮೂಲಕ ಎಲ್ಲರಿಗೂ ತಿಳಿಸುವುದೇನೆಂದರೆ, ಪ್ರಸ್ತುತ ಕರ್ನಾಟಕ ಸರ್ಕಾರದಲ್ಲಿ ನಿಯೋಜಿತನಾಗಿರುವ ––––––––––––– ಜಿಲ್ಲೆಯಲ್ಲಿಯ ––––––––––––––––– ನಿವಾಸಿಯಾದ ––––––––––––––– ಎಂಬ ನಾನು, ರಾಜ್ಯಪಾಲರಿಗೆ [ಇದರಲ್ಲಿ ಇನ್ನು ಮುಂದೆ ' ಸರ್ಕಾರ ' ಎಂದು ಉಲ್ಲೇಖಿಸಿದೆ] –––––––––––––– ರೂ.ಗಳ [––––––––––––––– ರೂಪಾಯಿಗಳ] ಹಣವನ್ನು ಹಾಗೂ ಅದರ ಮೇಲಿನ ಬಡ್ಡಿ ಸಮೇತ, ತತ್ಕಾಲದಲ್ಲಿ ಜಾರಿಯಲ್ಲಿರುವ ಸರ್ಕಾರಿ ಸಾಲಗಳು ಅಥವಾ ಭಾರತದ ಹೊರತು ಬೇರೆ ದೇಶದಲ್ಲಿ ಪಾವತಿ ಮಾಡಿದಲ್ಲಿ, ಬಾಕಿ ದಿನಾಂಕದಿಂದ ಸದರಿ ಮೊತ್ತಕ್ಕೆ ಸಮನಾದ ಮತ್ತು ಆ ದೇಶ ಹಾಗೂ ಭಾರತ ನಡುವಿನ ಅಧಿಕೃತ ವಿನಿಮಯ ದರದ ಆ ದೇಶದ ಪರಿವರ್ತಿತ ಕರೆನ್ಸಿಗಾಗಿ ಸರ್ಕಾರಿ ದರಗಳನ್ನು ನ್ಯಾಯವಾದಿ (ಅಟಾರ್ನಿ) ಮತ್ತು ಕಕ್ಷಿದಾರರ ಸಂಬಂಧದ ಎಲ್ಲಾ ವೆಚ್ಚಗಳ ಸಮೇತ ಹಾಗೂ ಸರ್ಕಾರವು ವಹಿಸಿಕೊಳ್ಳತಕ್ಕಂಥ ಹಾಗೂ ವಹಿಸಿಕೊಳ್ಳಬಹುದಾದಂಥ ಎಲ್ಲಾ ಚಾರ್ಜುಗಳೂ ಮತ್ತು ಖರ್ಚುಗಳನ್ನು ಸಂದಾಯ ಮಾಡಲು ನಾನು ಮತ್ತು ನನ್ನ ಉತ್ತರಾಧಿಕಾರಿಗಳು, ನಿರ್ವಾಹಕರು ಮತ್ತು ಆಡಳಿತಗಾರರು ಬದ್ಧರಾಗಿದ್ದೇವೆ.

ಎರಡು ಸಾವಿರದ –––––––––––––––––ರ –––––––––––––––––– ದಿನಾಂಕದಂದು, ದಿನಾಂಕ ಸಮೇತ ಸಹಿ ಮಾಡಲಾಗಿದೆ.

––––––––––––––– ರಿಂದ –––––––– ವರೆಗಿನ ಅವಧಿಗಾಗಿ ಅಧ್ಯಯನಕ್ಕೆಂದು –––––––ಎಂಬ ನಾನು ಸರ್ಕಾರದಿಂದ ನಿಯೋಜಿತನಾಗಿರುವುದರಿಂದ, ಅದಕ್ಕೆ ಸಂಬಂಧಿಸಿದಂತೆ ––––––––––– ರೂ.ಗಳಿಗೆ [–––––––– ರೂಪಾಯಿಗಳು] ಭಾರತದ ರಾಷ್ಟ್ರಪತಿಗಳ ಹೆಸರಿನಲ್ಲಿ –––––––––––––ರ ನಡುವೆ ಬಂಧಪತ್ರವನ್ನು ನಾನು ಬರೆದುಕೊಟ್ಟಿರುವುದರಿಂದ;

ಮತ್ತು ನನ್ನ ಕೋರಿಕೆಯ ಮೇರೆಗೆ ಅಧ್ಯಯನದ ನಿಯೋಜಿತ ಅವಧಿಯ ವಿಸ್ತರಣೆಯನ್ನು ––––––––––––– ವರೆಗೆ ಮಂಜೂರು ಮಾಡಿರುವುದರಿಂದ,

ಮತ್ತು ಸರ್ಕಾರದ ಹಿತಾಸಕ್ತಿಯನ್ನು ಕಾಪಾಡುವುದಕ್ಕಾಗಿ ನಾನು ಈ ಕೆಳಗಿನ ಲಿಖಿತ ಷರತ್ತುಗಳಂತೆ ಈ ಬಂಧಪತ್ರವನ್ನು ಬರೆದುಕೊಡಲು ಒಪ್ಪಿರುವುದರಿಂದ;

ಈಗ ಮೇಲಿನ ಲಿಖಿತ ಬಾಧ್ಯತೆಯ ಷರತ್ತೇನೆಂದರೆ ಹಾಗೆ ವಿಸ್ತರಿಸಿದ ಅಧ್ಯಯನದ ಅವಧಿಯು ಮುಕ್ತಾಯವಾದ ಅಥವಾ ಕೊನೆಗೊಂಡ ನಂತರ, ಕರ್ತವ್ಯಕ್ಕೆ ಹಿಂತಿರುಗದೇ ನಾನು, ರಾಜೀನಾಮೆ ಅಥವಾ ಸೇವಾ ನಿವೃತ್ತಿ ಹೊಂದಿದ ಸಂದರ್ಭದಲ್ಲಿ ಅಥವಾ ಕರ್ತವ್ಯಕ್ಕೆ ನಾನು ಹಿಂತಿರುಗಿದ ನಂತರ ಮೂರು ವರ್ಷಗಳ ಅವಧಿಯ ಒಳಗಾಗಿ ಯಾವುದೇ ಸಮಯದಲ್ಲಿ ನಾನು ಸರ್ಕಾರಕ್ಕೆ ತಕ್ಷಣವೇ ಅಥವಾ ಸರ್ಕಾರವು ನಿರ್ದೇಶಿಸಬಹುದಾದಂತೆ ಕೋರಿದಾಗ–––––––––––––––––– ರೂ.ಗಳನ್ನು [––––––––––– ರೂಪಾಯಿಗಳು] ಕೋರಿದ ದಿನಾಂಕದಿಂದ ಅದರ ಮೇಲಿನ ಬಡ್ಡಿ ಸಮೇತ, ಸರ್ಕಾರಿ ಸಾಲಗಳ ಮೇಲೆ ತತ್ಕಾಲದಲ್ಲಿ ಜಾರಿಯಲ್ಲಿರುವ ಸರ್ಕಾರಿ ದರಗಳಲ್ಲಿ ಸದರಿ ಹಣವನ್ನು ಸಂದಾಯ ಮಾಡುತ್ತೇನೆ.

ಮತ್ತು ಅಂಥ ಸಂದಾಯವನ್ನು ನಾನು ಮಾಡಿದ ನಂತರ ಮೇಲಿನ ಲಿಖಿತ ಬಾಧ್ಯತೆಯು ಅಸಿಂಧುವಾಗತಕ್ಕದ್ದು ಮತ್ತು ಪರಿಣಾಮರಹಿತವಾಗತಕ್ಕದ್ದು. ಅನ್ಯಥಾ ಅದು ಪೂರ್ಣವಾಗಿ ಜಾರಿಯಲ್ಲಿರತಕ್ಕದ್ದು ಬಲವನ್ನು ಹೊಂದಿರತಕ್ಕದ್ದು.

ಈ ಬಂಧಪತ್ರಕ್ಕೆ ಸಂದಾಯ ಮಾಡಲಾಗುವ ಸ್ಟ್ಯಾಂಪು ಸುಂಕವನ್ನು ಸರ್ಕಾರವೇ ಭರಿಸತಕ್ಕದ್ದು ಮತ್ತು ಸಂದಾಯ ಮಾಡತಕ್ಕದ್ದು. ರಾಜ್ಯಪಾಲರಿಗಾಗಿ ಮತ್ತು ಅವರ ಪರವಾಗಿ (1) –––––––––––––––– (2) ––––––––––––––– ಸಾಕ್ಷಿದಾರ/ದಾರರ ಸಮಕ್ಷಮದಲ್ಲಿ –––––––––––––––––––– ಸಹಿ ಮಾಡಿ ಒಪ್ಪಿಸಿದ್ದಾರೆ.

____________________

____________________

**ರಾಜ್ಯಪಾಲರು**____________

**ಪರಿಶಿಷ್ಟ– 'ಬಿ'**

**[ನಿಯಮ 12ನ್ನು ನೋಡಿ]**

**ಅಧ್ಯಯನಕ್ಕಾಗಿ ಪ್ರತಿನಿಯೋಜನೆ ಮತ್ತು ಅಂಥ ಪ್ರಯೋಜನ ನೀಡಿಕೆಗಾಗಿ ಅರ್ಜಿ ಸಲ್ಲಿಸುವ ಸಂಬಂಧದಲ್ಲಿ ಕಾರ್ಯವಿಧಾನ ಸೂಚನೆಗಳು**

1. ಈ ನಿಯಮಗಳಲ್ಲಿ ಅನ್ಯಥಾ ಉಪಬಂಧಿಸಿರುವುದನ್ನು ಹೊರತುಪಡಿಸಿ ಅಧ್ಯಯನಕ್ಕಾಗಿ ಪ್ರತಿನಿಯೋಜನೆಗಾಗಿನ ಎಲ್ಲಾ ಅರ್ಜಿಗಳನ್ನು ಆ ಅಧಿಕಾರಿಯು, ತಾನು ಕಾರ್ಯನಿರ್ವಹಿಸುತ್ತಿರುವ ಇಲಾಖೆಯ ಮುಖ್ಯಸ್ಥರ ಮುಖಾಂತರ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಇವರಿಗೆ ಸಲ್ಲಿಸತಕ್ಕದ್ದು ಮತ್ತು ಉದ್ದೇಶಿಸಿದ ಅಧ್ಯಯನದ ವ್ಯಾಸಂಗ ಕ್ರಮ (ಕೋರ್ಸ್) ಅಥವಾ ವ್ಯಾಸಂಗ ಕ್ರಮಗಳನ್ನು ಹಾಗೂ ಅಧಿಕಾರಿಯು ತೆಗೆದುಕೊಳ್ಳಲಿಚ್ಛಿಸಿರುವ ಯಾವುದೇ ಪರೀಕ್ಷೆಯನ್ನು ಅದರಲ್ಲಿ ಸ್ಪಷ್ಟವಾಗಿ ನಿರ್ದಿಷ್ಟಪಡಿಸತಕ್ಕದ್ದು. ಅಧ್ಯಯನವು ಭಾರತದ ಹೊರಗೆ ನಡೆಯುತ್ತಿರುವಲ್ಲಿ, ಆ ದೇಶದಲ್ಲಿ ಭಾರತದ ದೂತಾವಾಸವಿದ್ದಲ್ಲಿ, ಸರ್ಕಾರವು, ಅನುಮೋದಿತ ಅಧ್ಯಯನ ಕಾರ್ಯಕ್ರಮದ ಪ್ರತಿಯನ್ನು, ಆ ದೂತಾವಾಸದ ಮುಖ್ಯಸ್ಥರಿಗೆ ಕಳುಹಿಸುವುದು. ತನ್ನ ಮೂಲ ಅರ್ಜಿಯಲ್ಲಿ ಪೂರ್ಣ ವಿವರಗಳನ್ನು ನೀಡಲು ಅಧಿಕಾರಿಗೆ ಸಾಧ್ಯವಿಲ್ಲದ ಸಂದರ್ಭದಲ್ಲಿ ಅಥವಾ ಭಾರತವನ್ನು ಬಿಟ್ಟ ನಂತರ, ಆತನು ಭಾರತದಲ್ಲಿ ಅನುಮೋದಿತವಾಗಿರುವ ಕಾರ್ಯಕ್ರಮದಲ್ಲಿ ಯಾವುದೇ ಬದಲಾವಣೆಯನ್ನು ಮಾಡಬೇಕಿದ್ದಲ್ಲಿ, ಸಂದರ್ಭಾನುಸಾರ ದೂತಾವಾಸದ ಮುಖ್ಯಸ್ಥರಿಗೆ ಅಥವಾ ಸರ್ಕಾರಕ್ಕೆ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗನೆ ಆತನು ವಿವರಗಳನ್ನು ಸಲ್ಲಿಸತಕ್ಕದ್ದು. ಅಂಥ ಸಂದರ್ಭದಲ್ಲಿ ವ್ಯಾಸಂಗ ಕ್ರಮಕ್ಕೆ ಸರ್ಕಾರದ ಅನುಮೋದನೆಯನ್ನು ಪಡೆಯುವವರೆಗೆ ತನ್ನ ಸ್ವಂತ ಜವಾಬ್ದಾರಿಯ ಮೇಲೆ ವ್ಯಾಸಂಗ ಕ್ರಮ (ಕೋರ್ಸ್)ವನ್ನು ಪ್ರಾರಂಭಿಸಲು ಅಥವಾ ಅದಕ್ಕೆ ಸಂಬಂಧಪಟ್ಟ ಯಾವುದೇ ಖರ್ಚುಗಳನ್ನು ಭರಿಸಲು ಆತನು ಸಿದ್ಧನಿದ್ದ ಹೊರತು ಹಾಗೆ ಮಾಡತಕ್ಕದ್ದಲ್ಲ.

2. (1) ಭಾರತದ ಹೊರಗೆ ಅಧ್ಯಯನಕ್ಕಾಗಿ ಪ್ರತಿನಿಯೋಜನೆಗಾಗಿನ ಅರ್ಜಿಯ ಸಂಬಂಧದಲ್ಲಿ ಸರ್ಕಾರವು ಮಂಜೂರಾತಿ ನೀಡಿದ ನಂತರ ಅದು, ಆ ದೇಶದಲ್ಲಿ ಭಾರತೀಯ ದೂತಾವಾಸವಿದ್ದಲ್ಲಿ, ಆ ದೂತಾವಾಸದ ಮುಖ್ಯಸ್ಥನಿಗೆ ಸಂದರ್ಭದ ವಿವರಗಳನ್ನು ತಿಳಿಸತಕ್ಕದ್ದು;

(2) ಅಧಿಕಾರಿಯೂ ಸಹ, ಆ ದೇಶದಲ್ಲಿ ಭಾರತೀಯ ದೂತಾವಾಸವಿದ್ದಲ್ಲಿ, ಆ ದೂತಾವಾಸದ ಮುಖ್ಯಸ್ಥನೊಂದಿಗೆ ಸಂಪರ್ಕಿಸಿ ಅಗತ್ಯವಿರಬಹುದಾದಂಥ ಯಾವುವೇ ವಿವರಗಳನ್ನು ಒದಗಿಸುವುದು ಮತ್ತು ಪರಿಚಯಪತ್ರವನ್ನು ನೀಡುವುದು.

3. ಅಧ್ಯಯನ ವ್ಯಾಸಂಗ ಕ್ರಮದ (ಕೋರ್ಸ್) ಪ್ರಭಾರದಲ್ಲಿ ಯಾರೇ ಪ್ರಾಧಿಕಾರಿಯಿದ್ದಲ್ಲಿ, ಅವರ ಷರಾದೊಂದಿಗೆ ವ್ಯಾಸಂಗ ಕ್ರಮ (ಕೋರ್ಸ್) ಪ್ರಾರಂಭವಾದ ಮತ್ತು ಮುಕ್ತಾಯವಾದ ದಿನಾಂಕಗಳನ್ನು ಸೂಚಿಸಿ ಪರೀಕ್ಷೆಗಳಲ್ಲಿ ಉತ್ತೀರ್ಣನಾಗಿರುವ ಬಗ್ಗೆ ಅಥವಾ ಅಧ್ಯಯನ ಕೈಗೊಂಡ ವಿಶೇಷ ವ್ಯಾಸಂಗ ಕ್ರಮಗಳ ಬಗ್ಗೆ (ಕೋರ್ಸ್‌ಗಳು) ಪ್ರಮಾಣಪತ್ರಗಳ ಸಮೇತ ಸರ್ಕಾರವು ನಿಗದಿಪಡಿಸಿದ ನಮೂನೆಯಲ್ಲಿ ಪ್ರಮಾಣಪತ್ರವನ್ನು, ಅಧ್ಯಯನ ವ್ಯಾಸಂಗ ಕ್ರಮ (ಕೋರ್ಸ್) ಕೊನೆಗೊಂಡ ನಂತರ ಸಂಬಂಧಪಟ್ಟ ದೂತಾವಾಸದ ಮುಖ್ಯಸ್ಥರಿಗೆ ಕಳುಹಿಸತಕ್ಕದ್ದು. ಭಾರತದಲ್ಲಿ ಅಥವಾ ಭಾರತೀಯ ದೂತಾವಾಸ ಇಲ್ಲದಿರುವ ಇತರ ಯಾವುದೇ ದೇಶದಲ್ಲಿ ಅಧ್ಯಯನ ರಜೆಯನ್ನು ತೆಗೆದುಕೊಂಡಾಗ, ಅಂಥ ಪ್ರಮಾಣಪತ್ರಗಳನ್ನು ರಜೆಯನ್ನು ಮಂಜೂರು ಮಾಡಿರುವ ಸರ್ಕಾರಕ್ಕೆ ಕಳುಹಿಸತಕ್ಕದ್ದು.

**ಕಾರ್ಯನಿರ್ವಾಹಣಾ ಸೂಚನೆ 'ಬಿ'**

1. ಮೇಲೆ ಉಲ್ಲೇಖಿಸಿದ ಅರ್ಜಿಗಳನ್ನು ಹಣಕಾಸು ಇಲಾಖೆ, ವಿದೇಶಾಂಗ ವ್ಯವಹಾರಗಳು ಹಾಗೂ ಕೆಲವು ಸಲ ಶಿಕ್ಷಣ ಮಂತ್ರಾಲಯದೊಡನೆ ಸಮಾಲೋಚಿಸಿ ಪರಿಶೀಲಿಸಬೇಕಾಗುತ್ತದೆ ಮತ್ತು ಹಲವಾರು ಸಂದರ್ಭಗಳಲ್ಲಿ ವಿದೇಶಿ ವಂತಿಗೆ ನಿಯಂತ್ರಣ ಅಧಿನಿಯಮದ ದೃಷ್ಠಿಯಿಂದ ಸಮಾಜ ಕಲ್ಯಾಣ ಮಂತ್ರಾಲಯದ ಒಪ್ಪಿಗೆ ಸಹ ಅಗತ್ಯವಾಗುತ್ತದೆ. ಅದಕ್ಕನುಸಾರವಾಗಿ, ಅಧ್ಯಯನಕ್ಕಾಗಿ ವಿದೇಶಿ ವಿಶ್ವವಿದ್ಯಾನಿಲಯಗಳಲ್ಲಿ ಸ್ಥಾನ ಪಡೆಯಲು ಅಥವಾ ಪ್ರತಿನಿಯೋಜನೆಗಾಗಿ ಅರ್ಜಿಗಳನ್ನು ತಡವಾಗಿ ಸಲ್ಲಿಸುವುದರಿಂದ ಸಂಬಂಧಪಟ್ಟ ಇಲಾಖೆಗಳಿಗೆ ತಪ್ಪಿಸಬಹುದಾಗಿದ್ದ ಅನಾನುಕೂಲತೆಗೆ ಕಾರಣವಾಗುವುದಷ್ಟೇ ಅಲ್ಲದೆ, ಅರ್ಜಿದಾರರು ಸ್ವತಃ ಅನಗತ್ಯ ಆತಂಕಕ್ಕೆ ಒಳಗಾಗುವುದಕ್ಕೆ ಕಾರಣವಾಗುತ್ತದೆ. ಆದುದರಿಂದ, ಅಂಥ ಅರ್ಜಿಯ ಸೂಕ್ತ ಪರಿಶೀಲನೆಗೆ ಅನುಕೂಲ ಮಾಡಿಕೊಡುವ ದೃಷ್ಟಿಯಿಂದ ಈ ಮುಂದಿನ ಪ್ರಕ್ರಿಯೆಯನ್ನು (ಕಾರ್ಯವಿಧಾನವನ್ನು) ನಿಯಮಿಸಲಾಗಿದೆ:–

(i) ವಿದೇಶದಲ್ಲಿ ಉನ್ನತ ಅಧ್ಯಯನ ಪಡೆಯುವುದಕ್ಕಾಗಿ ಪ್ರವೇಶ ಅಥವಾ ಪ್ರತಿನಿಯೋಜನೆ ಕೋರುವ ಅರ್ಜಿಗಳನ್ನು ಈ ಉದ್ದೇಶಕ್ಕಾಗಿ ನಿಯಮಿಸಲಾದ ಕೊನೆಯ ದಿನಾಂಕಕ್ಕೆ ಕಡೇ ಪಕ್ಷ 3 ತಿಂಗಳುಗಳ ಮುಂಚೆ ಹಾಗೆ ಅರ್ಜಿಯನ್ನು ಕಳುಹಿಸಿಕೊಡದಿರಲು ಒಪ್ಪಿಗೆಯಾಗುವಂಥ ಕಾರಣಗಳಿದ್ದ ಹೊರತು, ಸದರಿ ಅವಧಿಯೊಳಗೆ ಈ ಇಲಾಖೆಗೆ ಕಳುಹಿಸತಕ್ಕದ್ದು. ಅದನ್ನು ಪರಿಶೀಲಿಸಿದ ನಂತರ ಅಗತ್ಯ ಒಪ್ಪಿಗೆ ಪಡೆಯುವುದಕ್ಕಾಗಿ ಭಾರತ ಸರ್ಕಾರಕ್ಕೆ ಕಳುಹಿಸಲಾಗುವುದು.

(ii) ಅಧ್ಯಯನಕ್ಕಾಗಿ ಪ್ರತಿನಿಯೋಜಿಸುವ ಸಲುವಾಗಿ ಅರ್ಜಿಗಳನ್ನು ಭಾರತ ಸರ್ಕಾರಕ್ಕೆ ಕಳುಹಿಸುವುದಕ್ಕೆ ಮುಂಚೆ, 2008ರ ನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಅರ್ಹತಾ ಷರತ್ತುಗಳನ್ನು ಅಧಿಕಾರಿಯು ಪೂರೈಸಿರುವನೇ ಎಂಬುದನ್ನು ಸತ್ಯಾಪನೆ ಮಾಡಲಾಗುವುದು.

(iii) ವಿದೇಶಿ ಪ್ರತಿನಿಯೋಜನೆ ಸಂಬಂಧದಲ್ಲಿ ಸ್ಥಳ ನಿಯುಕ್ತಿಗಾಗಿ ಅರ್ಜಿಗಳನ್ನು ಕಳುಹಿಸುವಾಗ ವಿಶ್ವವಿದ್ಯಾನಿಲಯಗಳು/ರಾಜ್ಯ ಸರ್ಕಾರಗಳು ಇತ್ಯಾದಿಗಳು ಪ್ರವೇಶವನ್ನು ಯಾವ ವಿಷಯಗಳಲ್ಲಿ ಕೋರಲಾಗಿದೆಯೋ, ಆ ವಿಷಯಗಳು, ವ್ಯಾಸಂಗ ಕ್ರಮದ ಅವಧಿ, ಅದು ಪದವಿ, ಡಿಪ್ಲೋಮಾ ಇತ್ಯಾದಿಗಳಿಗೆ ಅವಕಾಶ ನೀಡುವುದೇ ಎಂಬ ಬಗ್ಗೆ ಪೂರ್ತಿ ವಿವರಗಳನ್ನು ಒದಗಿಸತಕ್ಕದ್ದು. ಅಗತ್ಯವಿರುವ ರಜೆಯ ಅವಧಿ ಮತ್ತು ಸ್ವರೂಪವನ್ನು ಸಹ ನಿರ್ದಿಷ್ಟಪಡಿಸತಕ್ಕದ್ದು.

(iv) ಅಧಿಕಾರಿಯು, ವಿದೇಶದಲ್ಲಿ ಅಧ್ಯಯನ ಮಾಡುವಾಗ ತನ್ನ ವಾಸದ ಬಗ್ಗೆ ಹಣಕಾಸು ವ್ಯವಸ್ಥೆಯನ್ನು ಮತ್ತು ವಿಶೇಷವಾಗಿ ವಿದೇಶದಲ್ಲಿ ವಿದೇಶಿ ವಿನಿಮಯದ ಅಗತ್ಯತೆಗಳನ್ನು ಯಾವ ರೀತಿಯಲ್ಲಿ ಪೂರೈಸಿಕೊಳ್ಳಲು ಉದ್ದೇಶಿಸಿದ್ದಾನೆ

ಎಂಬುದನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. ಅಧಿಕಾರಿಯು ವಿದ್ಯಾರ್ಥಿ ವೇತನ, ಅಥವಾ ಸಂಶೋಧನಾ ವೇತನ ಅಥವಾ ಅರೆಕಾಲಿಕ ಉದ್ಯೋಗದ ಮೂಲಕವಾಗಿ ಯಾವುದು ಹಣಕಾಸು ನೆರವನ್ನು ಸ್ವತಃ ಕೋರಲು ಅಥವಾ ಪಡೆಯಲು ಉದ್ದೇಶಿಸುತ್ತಿದ್ದರೆ ಅಂಥ ಸಹಾಯದ/ಪರಿಶ್ರಮ ಧನದ ಪ್ರಮಾಣ, ಮತ್ತು ಮೂಲಗಳನ್ನು ಪ್ರತ್ಯೇಕವಾಗಿ ಸಹ ತಿಳಿಸತಕ್ಕದ್ದು.

(v) ಅಧ್ಯಯನಕ್ಕಾಗಿ ಪ್ರತಿನಿಯೋಜನೆಗೆ ಸಂಬಂಧಪಟ್ಟ ಇತರ ವಿಷಯಗಳ ಬಗ್ಗೆ ಮಂಜೂರಾತಿಯನ್ನು ಪೂರ್ವಭಾವಿಸತಕ್ಕದ್ದಲ್ಲ.

(vi) ಅಧಿಕಾರಿಯು, ಅಡೆತಡೆಯನ್ನು ತಪ್ಪಿಸಲು ಪ್ರತಿನಿಯೋಜನೆಯ ಮಂಜೂರಾತಿಯ ನಿರೀಕ್ಷೆಯಲ್ಲಿ ಪ್ರಯಾಣ, ಇತ್ಯಾದಿಗಾಗಿ ಯಾವುವೇ ಸಿದ್ಧತೆಗಳನ್ನು ಮಾಡಿಕೊಳ್ಳತಕ್ಕದ್ದಲ್ಲ. ಅವರು ತಮ್ಮ ಸ್ವಂತ ಹೊಣೆಯ ಮೇಲೆ ಮಾತ್ರ ಹಾಗೆ ಮಾಡಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು–1)

**ಅಧಿಸೂಚನೆ – II**

**ಸಂಖ್ಯೆ : ಎಫ್‌ಡಿ 5 ಎಸ್‌ಆರ್‌ಎ 08, ಬೆಂಗಳೂರು, ದಿನಾಂಕ : 9ನೇ ಮಾರ್ಚ್, 2009**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗೆ ಇನ್ನಷ್ಟು ತಿದ್ದುಪಡಿ ಮಾಡುವ ನಿಯಮಗಳ ಕರಡನ್ನು ಅದರಿಂದ ತೊಂದರೆಗೊಳಗಾಗಬಹುದಾದ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಈ ಕರಡು ಪ್ರಕಟವಾದ ದಿನಾಂಕದಿಂದ ಹದಿನೈದು ದಿಗಳೊಳಗಾಗಿ ಆಕ್ಷೇಪಣೆಗಳು / ಸಲಹೆಗಳನ್ನು ಆಹ್ವಾನಿಸಿ, ದಿನಾಂಕ 24ನೇ ಡಿಸೆಂಬರ್ 2008 ರಂದು ಕರ್ನಾಟಕ ರಾಜ್ಯಪತ್ರದ ಭಾಗ–4ಎ ರಲ್ಲಿ ಅಧಿಸೂಚನೆ ಸಂಖ್ಯೆ:ಎಫ್‌ಡಿ 5 ಎಸ್‌ಆರ್‌ಎ 2008 ರ ದಿನಾಂಕ 22ನೇ ಡಿಸೆಂಬರ್ 2008 ನ್ನು ಕರ್ನಾಟಕ ನಾಗರೀಕ ಸೇವಾ ಅಧಿನಿಯಮ 1978 ರ (1990 ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾಗುವ 3ನೇ ಪ್ರಕರಣದ (2) ನೇ ಉಪ ಪ್ರಕರಣದ ಖಂಡ (ಎ) ದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ:

ಸದರಿ ರಾಜ್ಯಪತ್ರವನ್ನು ದಿನಾಂಕ 24ನೇ ಡಿಸೆಂಬರ್ 2008 ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ ಮತ್ತು ಇದರ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ರೀತಿಯ ಆಕ್ಷೇಪಣೆಗಳು / ಸಲಹೆಗಳು ಬಂದಿರುವುದಿಲ್ಲವಾದ್ದರಿಂದ.

ಈಗ 1978 ರ ಕರ್ನಾಟಕ ನಾಗರೀಕ ಸೇವಾ ಅಧಿನಿಯಮದ (1990 ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪ್ರಕರಣದ (1) ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಗಿನ ನಿಯಮಗಳನ್ನು ಈ ಮೂಲಕ ಮಾಡುತ್ತದೆ, ಎಂದರೆ:–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.–**

(1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (1ನೇ ತಿದ್ದುಪಡಿ) ನಿಯಮಗಳು, 2009 ಎಂದು ಕರೆಯತಕ್ಕದ್ದು.

(2) ಇವು, ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 61ನೇ ನಿಯಮದ ತಿದ್ದುಪಡಿ.**–ಕರ್ನಾಟಕ ಸಿವಿಲ್ ಸೇವಾ ನಿಯಮಗಳ 61ನೇ ನಿಯಮದಲ್ಲಿ (3)ನೇ ಉಪ ಪ್ರಕರಣದ ನಂತರ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, 'ಎ' ಸಮೂಹದ ಅಧಿಕಾರಿಗಳ ಸಂಬಂಧದಲ್ಲಿ, ಭಾರತದ ಒಳಗೆ ಅಥವಾ ಹೊರಗೆ ಉನ್ನತ ಅಧ್ಯಯನಗಳನ್ನು ಅಥವಾ ವಿಶೇಷ ತರಬೇತಿಯನ್ನು ಒಳಗೊಂಡ ವಿಶೇಷ ಅಧ್ಯಯನ ವ್ಯಾಸಂಗ ಕ್ರಮದ (ಕೋರ್ಸ್) ಮುಂದುವರಿಕೆಗಾಗಿ ಪ್ರತಿನಿಯೋಜನೆಯ ಸೌಲಭ್ಯ ಕರ್ನಾಟಕ ಸಿವಿಲ್ ಸೇವಾ (ಸಮೂಹ–ಎ ಅಧಿಕಾರಿಗಳಿಗೆ ಉನ್ನತ ಅಧ್ಯಯನದ ಮುಂದುವರಿಕೆಗೆ ಪ್ರತಿನಿಯೋಜನೆ ಮತ್ತು ತರಬೇತಿ ರಜೆ) ನಿಯಮಗಳು, 2008 ರಿಂದ ನಿಯಂತ್ರಿತವಾಗತಕ್ಕದ್ದು.

ತಿದ್ದುಪಡಿ ಸಂಖ್ಯೆ : 1264 ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–1).

**FINANCE SECRETARIAT**

**NOTIFICATION**

**No. FD 5 SRA 2008, Bangalore, Dated : 9th March, 2009**

Whereas the draft of the Karnataka Civil Services (Deputation for prosecution of higher studies and training leave to Group-A Officers) Rules 2008, which the Government of Karnataka proposes to make was published as required by clause (a) of sub-section(2) of Section 3 read with section 8 of the Karnataka Civil Services Act, 1978 (Karnataka Act 14 of 1990) in Notification No.FD 5 SRA 2008 dated 22.12.2008 in Part IVA of the Karnataka Gazette dated 24th December 2008 inviting objection and suggestions from all persons likely to be affected thereby within fifteen days from the date of its publication in the Official Gazette.

Whereas the said Gazette was made available to the public on dated 24th December 2008.

And whereas, no objections and suggestions have been received by the State Government.

Now, therefore, in exercise of the powers conferred by sub-section(1) of Section 3 read with Section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rule, namely:-

**RULES**

1. **Title, Commencement and Application:- (1)** These Rules may be called (Deputation for prosecution of higher studies and training leave to Group-A Officers) Rules 2008.

(2) They shall come into force from the date of their publication in the Official Gazette.

(3) They shall apply to Group 'A' Officers of the State Civil Services.

2. **Definitions:-** In these rules, unless the context otherwise requires:

(a) Appendix means an appendix annexed to these rules:

(b) 'Head of Mission' means Ambassador, Charge d' Affairs, Ministers, Consul-General, High Commissioner and any other authority declared as such by the Central Government in the country in which the Officer undergoes a course of study or training.

(c) All other words and expressions used in these rules but not defined shall have the same meaning respectively assigned to them in the Karnataka Civil Services Rules or any other rules regulating the service conditions of Government Servants.

3. **Conditions for Deputation to Study:-**

(1) Subject to the conditions specified in these rules, a Group-A officer may be deputed, with due regard to the exigencies of public service, to enable him to undergo, in or out of India:-

(i) for a special course of study consisting of higher studies or specialized training in a professional or technical subject having a direct and close connection with the sphere of his duty; or

(ii) for a course of training or study tour, where such course of training or study tour is related to the sphere of his duties even though he/she may not attend a regular academic or semi-academic course; or

(iii) for studies connected with the framework or background of public administration; or

(iv) for studies which may not be closely or directly connected with the work of the Officer, but which are capable of widening his mind in a manner likely to improve his ability as a civil servant and to equip him better to collaborate with those employed in other branches of public service:

Provided that the deputation under clauses (ii) and (iii) shall be subject to the following conditions, namely:-

(a) that the particular course of training, study or study tour identified and notified by the Government in Department of Personnel and Administrative Reforms(Administrative Reforms); and

(b) that the Officer is required to submit, on his return, a full report on the work done by him while on study leave.

(c) The number of Officers to be granted study leave shall be kept at the minimum, not exceeding 5% of the sanctioned permanent strength of the Cadre.

(d) An Officer may be deputed for higher studies or training only once during his entire service.

(e) The Officer who has availed the benefit of deputation as per the provisions of Appendix-IIA of KCSRs, are not eligible for the benefit of deputation under this rules.

Provided further that for deputation falling under clause (iv) shall be considered on merits of each case by the Government.

(2) Deputation shall not be made unless:-

(i) it is certified by the Government that the proposed course of study or training shall be or definite advantage from the point of view of public interest; and

(ii) it is prosecution of studies in subjects other than academic or literary subjects.

(3) Deputation out of India shall not be made:-

(i) without the prior approval of the Government and

(ii) for the prosecution of studies in subjects for which adequate facilities exist in India or under any of the Schemes administered by the Government of India/State Government.

(4) The Officer shall not be deputed:-

(i) if he has rendered less than 'seven years' service under the Government and

(ii) if he complete 30 years of qualifying service or attain 50 years of age within three years of the date on which he expected to return to duty after the expiry of the leave

(5) Deputation shall not be made with such frequency as to remove him from contract with his regular work or to cause cadre difficulties owing to his absence on leave.

**4. Maximum period of Deputation:-** Maximum period of deputation shall not exceed the normal duration of the course or studies.

**5. Combination of period of deputation with leave of other kinds:-**

(1) Period of deputation for Study may be combined with other kinds of leave, but in no case shall the grant of this leave in combination with leave other than extraordinary leave, involve a total absence of more than twenty-eight months generally and thirty – six months for the courses leading to Ph.D degree from the regular duties of the Officer.

**Explanation:-** The limit of twenty-eight months or thirty-six months of absence specified in this sub rule includes the period of vacation.

(2) Officer deputed to study in combination with any other kind of leave may, if he so desires, commence his study before the end of the other kind of leave but the period of such leave coinciding with course of study shall not count as study leave.

**6. Regulation of period of deputation extending beyond course of study: -** When the course of study falls short of the period of deputation to study, the Officer shall resume duty on the conclusion of the course of study, unless the previous sanction of the government to treat the period of short-fall as ordinary leave has been obtained.

**7. Grant of study and other allowance:-**

(1) A study allowance shall be granted to an Officer who has been deputed to study out of India, for the period spent in prosecuting a definite course of study at a recognized institution or in any definite tour or inspection of any special class of work, as well as for the period covered by any examination at the end of the course of study:

Provided that the period for which study allowance may be granted shall not exceed twenty four months in all.

(2) (a) The rates of study allowance shall be as follows,

namely:-

| Name of Country | Study allowance per diem |
|---|---|
| Australia........................ | 1.00 (Pound Sterling) |
| Continent of Europe....... | 1.65 (Pound) |
| New Zealand................. | 1.20 (Pound) |
| United Kingdom........... | 2.00 (Pound) |
| Unites States of America | 2.75 (Pound) |

(b) The rate of study allowance to be granted to an Officer who takes study leave in other countries shall be such as may specially be determined by the Central Government keeping in view the rates prescribed by the Central Government in such cases.

(c) No allowance of any kind, other than study allowance, house rent "allowance" where admissible, dearness allowance or the traveling allowance, where specially sanctioned under sub-rule (10) of the rule 7, shall be admissible to an Officer in respect of the period of study leave granted to him.

(3) Study allowance may be paid at the end of every month provisionally subject to an undertaking in writing being obtained from the Officer that he would refund to Government any over-payment consequent on his failure to produce the required certificate of attendance or otherwise.

(4) Officer may be allowed to draw study allowance for the entire period of vacation during the course of study subject to the conditions that:-

(i) he attends during vacation any special course of study or practical training under the direction of the Government; or

(ii) in the absence of any such direction, he produces satisfactory evidence before the Government or Head of Mission, as the case may be, that he has continued his studies during the vacation.

(5) No study allowance shall be drawn during the vacation falling at the end of a course of study except for a maximum period of fourteen days.

**NOTE:-** The period of vacation during which study allowance is drawn shall be taken into account in calculating the maximum period of twenty four months for which study allowance is admissible.

(6) Study allowance shall not be granted for any period during which the Officer interrupts his course of study to suit his own convenience.

Provided that the Government, in case where the Officer is deputed to a country where there is no Indian Mission and by the Head of Mission in other cases may authorize the grant of Study allowances for any period not exceeding fourteen days at a time during which are Officer is prevented by sickness from pursuing his course of study.

(7) In case of definite course of study at a recognized institution, the study allowance shall be payable by the Government, if the study leave availed of is in a country where there is no Indian Mission and by the Head of Mission in other cases, on claims submitted by the Officer from time to time, supported by proper certificates of attendance.

(8) The certificate of attendance required to be submitted in support of the claims for study allowance shall be forwarded at the end of the term, if the Officer is undergoing study in an educational institution or at intervals not exceeding three months, if he is undergoing study at any other institution.

(9) When the programme of study approved does not include or does not consist entirely of such a course of study, the Officer shall submit to the Government or Head of Mission, as the case may be, a diary showing how his time has been spent and report indicating fully the nature of the methods and operations which have been studied and including suggestions as to the possibility of adopting such methods or operations to conditions obtaining in India. The Government shall decide whether the diary and report show if the time of the Officer was properly employed and shall determine accordingly for what period study allowance may be granted.

(10) An Officer shall not ordinarily be paid travelling allowance but the Government may in exceptional circumstances sanction the payment of such allowance.

(11) An Officer, who is deputed to study, may be permitted to receive and retain, in addition to his leave salary, any scholarship or stipend that may be awarded to him from a Government or non-Government source. Such an Officer shall ordinarily not be granted any study allowance; but in special cases where the net amount of the scholarship or stipend (i.e. the value of the scholarship or stipend minus any cost of fees paid by the Officer) is less than the study allowance that would be admissible but for the scholarship or stipend, the difference between the value of the net scholarship or stipend and the usual study allowance may be granted by special sanction.

(12) If an Officer, who is deputed to study, is permitted to receive and retain, in addition to his leave salary, any remuneration in respect of a part-time employment, he shall ordinarily not be granted any study allowance; but in special cases where the net amount of remuneration received in respect of the part-time employment (i.e. remuneration minus any cost of fees paid by the Officer) is less than the study allowance that would be admissible but for the remuneration, the difference between the net remuneration and the usual study allowance may be granted by special sanction.

**8. Cost of fees for study:-** An Officer deputed to study shall ordinarily be required to meet the cost of fees paid for the study but in exceptional cases the Government may sanction the grant to such fees:

Provided that in no case the cost of fees shall be paid to the Officer, who is in receipt of scholarship or stipend, or who is permitted to receive or retain, in addition to his leave salary, any remuneration in respect of part –time employment, if the quantum of the stipend or scholarship or remuneration from part-time employment is equal to or more than the amount of fees payable.

Provided further that in case where the quantum of scholarship or stipend or remuneration in respect of part-time employment is less than the fees payable, the Officer may be sanctioned the amount equivalent to the difference between the quantum of such scholarship or stipend or remuneration in respect of part-time employment and the fees.

**9. Resignation or retirement after deputation to study or non completion of the course study:-**

(1) Every Officer, who has been deputed to study or extension of such leave shall be required to execute a bond as given in Appendix A or Appendix AI, as the case may be, before the study or extension of such leave granted to him commences.

(2) If the Officer resigns or retires from Service without returning to duty after a period of study or within a period of three years after such return to duty or fails to complete the course of study and is thus unable to furnish the certificates referred to in Appendix 'B' he shall be required to refund.

(i) the actual amount of leave salary, study allowance, cost of fees, traveling and other expenses, if any, drawn by him for the period of study leave, and

(ii) the actual amount, if any, of the cost incurred in connection with the course of study by other agencies, such as the foreign Government, Foundations, or Trusts together with interest thereon, at Government rates for the time being in force on Government loans from the date of demand before his resignation is accepted or permission to retire is granted:

Provided that in the case of an Officer who fail to complete the course of study nothing in this rule shall apply:-

(a) to Officer who, on return to duty from study, is permitted to retire from service on medical grounds, and

(b) to an Officer, who after return to duty from study, is deputed to serve in any statutory or autonomous body or institution under the control of the Government and is subsequently permitted to resign from service under the Government with a view to his permanent absorption in the said statutory or autonomous body or institution in the public interest.

(3) The study leave availed of by such Officer shall be converted into regular leave standing at his credit on the date on which the study leave commenced, any regular leave taken in continuation of study leave being suitably adjusted for the purpose and the balance of the period of study leave if any, which cannot be so converted, treated as extraordinary leave. In addition to the amount to be refunded by the Officer under sub-rule (2), he shall be required to refund any excess of leave salary actually drawn over the leave salary admissible on conversion of the study leave as above.

(4) Notwithstanding anything contained in the foregoing sub-rules, the Government may, if it is necessary or expedient so to do, either in public interest or having regard to the peculiar circumstances of the case or class of cases, by order, waive or reduce the amount required to be refunded under sub-rule(2) by the Officer concerned.

**10. Leave salary, during the period of deputation to study:**

(1) During the period of deputation to study availed of outside India an Officer shall draw leave salary equal to amount of pay that the Officer would have drawn while on duty immediately before proceeding on such leave and in addition the dearness allowance and house rent allowance and study allowance admissible under rule 7.

(2) (a) During the period of deputation to study availed of in India, an Officer shall draw leave salary equal to the pay that he would have drawn while on duty immediately before proceeding on such leave and in addition, dearness allowance and house rent allowance.

(b) Payment of leave salary at full rate under clause (a) shall be subject to furnishing of a certificate by the Officer to the effect that he is not in receipt of any scholarship or stipend or remuneration in respect of any part-time employment.

(c) The amount, if any received by an Officer during the period of study leave as scholarship or stipend or remuneration in respect of any part-time employment as envisaged in sub-rule (11) and (12) of rule 7 shall be adjusted against the leave salary payable under this sub-

